# ಗುರಿ, ನೀತಿ, ನಿಯಮ ಮತ್ತು ಸಂಘಟನೆ

## AIMS, POLICY, RULES & ORGANISATION



## ಭಾಗ – II
## ರೋವರ್ ವಿಭಾಗ





## ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್

#39, ಶಾಂತಿಗೃಹ, ಅರಮನೆ ರಸ್ತೆ, ಬೆಂಗಳೂರು 560 001

ದೂ.: 080–22260017, 22267470, shq@bsgkarnataka.org

shanthigruha@scout.org.in, shantigruha@bsgkarnataka.org

www.bsgkarnataka.org



# ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯ

## ದೂರದರ್ಶಿತ್ವ - 2024

2024ರ ವೇಳೆಗೆ, ಅತ್ಯಂತ ಕ್ರಿಯಾಶೀಲ
ಯುವಚಳವಳಿಯಾದ ಅಂತರರಾಷ್ಟ್ರೀಯ ವ್ಯಾಪ್ತಿಯ
ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯು
ಮೌಲ್ಯಾಧಾರಿತವಾದ, ಅತ್ಯಾಕರ್ಷಕ ಗುಣಗಳುಳ್ಳ,
ಸ್ವಾವಲಂಬಿಯಾದ, ಲಿಂಗತಾರತಮ್ಯವಿಲ್ಲದ
ಯುವಜನಾಂಗದ ಅವಶ್ಯಕತೆಗಳಿಗನುಗುಣವಾಗಿ ಬೆಳೆಯುತ್ತದೆ.

ಅಲ್ಲದೆ, ಸಮರ್ಥ ನಾಯಕರುಗಳ ಪರಿಣಾಮಕಾರಿ
ಮಾರ್ಗದರ್ಶನದ ಮೂಲಕ ಮುಂದುವರೆದ ತಂತ್ರಜ್ಞಾನ,
ಉತ್ತಮ ಆಡಳಿತ ವ್ಯವಸ್ಥೆಯುಳ್ಳ ಸವಾಲಿನಿಂದ ಕೂಡಿದ
ಸಂಸ್ಥೆಯಾಗುತ್ತದೆ.

# ಗುರಿ, ನೀತಿ, ನಿಯಮಗಳು ಮತ್ತು ಸಂಘಟನೆ

## ಎ.ಪಿ.ಆರ್.ಓ. ಭಾಗ–2

## ಸ್ಕೌಟ್ ಶಾಖೆ

### ರೋವರ್ ವಿಭಾಗ

(30.11.2014ರಂದು ನಡೆದ ರಾಷ್ಟ್ರೀಯ ಪರಿಷತ್ ಸಭೆಯಲ್ಲಿ ಅನುಮೋದನೆ ಪಡೆದ ತಿದ್ದುಪಡಿಗಳ ಸಹಿತ)

ಮೂಲ ಅನುವಾದ:

**ಶಂಕರ್ ಎ.ಎಮ್., ಎಲ್.ಟಿ.(ರೋವರ್ಸ್)**

ಸಹಾಯಕ ರಾಜ್ಯ ಸಂಘಟನಾ ಆಯುಕ್ತರು

ಕರ್ನಾಟಕ ರಾಜ್ಯ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಚಿಕ್ಕಬಳ್ಳಾಪುರ

ಪರಿಷ್ಕರಣೆ :

**ರಾ. ಚಂದ್ರಶೇಖರನ್, ಎಲ್.ಟಿ.(ಕಬ್ಸ್) HWB (ರೋವರ್ಸ್)**

ಮಾಜಿ ರಾಜ್ಯ ಸ್ಥಾನಿಕ ಆಯುಕ್ತ (ಪ್ರಕಟನೆಗಳು)



**ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ**

ರಾಜ್ಯ ಕೇಂದ್ರ ಕಾರ್ಯಾಲಯ

ನಂ. 39, ಅರಮನೆ ರಸ್ತೆ, ಬೆಂಗಳೂರು – 560 001

ಗುರಿ, ನೀತಿ, ನಿಯಮಗಳು ಮತ್ತು ಸಂಘಟನೆ

ಎ.ಪಿ.ಆರ್.ಓ. ಭಾಗ–2

ಸ್ಕೌಟ್ ಶಾಖೆ

ಪ್ರಕಾಶಕರು :

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ

ರಾಜ್ಯ ಕೇಂದ್ರ ಕಾರ್ಯಾಲಯ, ನಂ. 39, ಶಾಂತಿಗೃಹ

ಅರಮನೆ ರಸ್ತೆ, ಬೆಂಗಳೂರು–560 001



ಪ್ರಥಮ ಮುದ್ರಣ : 2004

ಎರಡನೇ ಮುದ್ರಣ : 2018

ಪುಟಗಳು : viii + 148 = 156

ಬೆಲೆ : ರೂ. 35/-

ಮುದ್ರಣ :

ಸತ್ಯಶ್ರೀ ಪ್ರಿಂಟರ್ಸ್ ಪ್ರೈ. ಲಿ.

ನಂ. 16/1, 2ನೇ ಮುಖ್ಯರಸ್ತೆ, 3ನೇ ಅಡ್ಡರಸ್ತೆ

ಕಸ್ತೂರಿಬಾ ನಗರ, ಮೈಸೂರು ರಸ್ತೆ

ಬೆಂಗಳೂರು–560 026

ದೂರವಾಣಿ: 080–26748811

# ರಾಜ್ಯ ಮುಖ್ಯ ಆಯುಕ್ತರ ನುಡಿ

ಸ್ಕೌಟ್ ಸಂಸ್ಥೆಯ ಮರಿಗಳು, ಸ್ಕೌಟ್ ಹಾಗೂ ರೋವರ್ ಈ ಮೂರೂ ವಿಭಾಗಗಳಲ್ಲಿ ರೋವರ್ ವಿಭಾಗವು ಅತ್ಯಂತ ಕ್ರಿಯಾಶೀಲ ಎಂದು ಪರಿಗಣಿಸಲ್ಪಟ್ಟಿದೆ. ಮರಿಗಳು ಮತ್ತು ಸ್ಕೌಟುಗಳ ವಿಭಾಗಗಳಲ್ಲಿ ಕಲಿಕೆಗೇ ಪ್ರಾಧಾನ್ಯ. ಹಿರಿಯರ ಮಾರ್ಗದರ್ಶನ ಹಾಗೂ ಆದರ್ಶ ನಡೆವಳಿಕೆಗಳಿಗೆ ಹೆಚ್ಚು ಒತ್ತಾಸೆ ಮತ್ತು ಅವಶ್ಯಕತೆಗಳಿವೆ. ರೋವರ್ ವಿಭಾಗವು ಬಿಸಿ ರಕ್ತದ ಯುವಕರ ತಂಡ. ತಾವು ಕಲಿಯುತ್ತಾ, ನೆರೆ ಹೊರೆಗೆ, ಸಮಾಜಕ್ಕೆ ಉಪಯುಕ್ತವಾದ ಕಾರ್ಯಕ್ರಮಗಳನ್ನು ರೂಪಿಸಿ, ಕಾರ್ಯಗತ ಮಾಡುವ ರೂವಾರಿಗಳೇ ರೋವರ್‌ಗಳು. ಈ ವಿಭಾಗದಲ್ಲಿ ನೀತಿ, ನಿಯಮಗಳಿಗೆ ಸಂಬಂಧಪಟ್ಟ ಕನ್ನಡ ಪುಸ್ತಕದ ಅವಶ್ಯಕತೆ ಬಹಳವಾಗಿದ್ದಿತು. ಈ ಕೊರತೆಯನ್ನು ತುಂಬಲು ಯುವ ರೋವರ್ ನಾಯಕ ಶ್ರೀ ಎ.ಎಂ.ಶಂಕರ್ ತನ್ನ ಎಲ್.ಟಿ. ತರಬೇತಿಯ ನಿಯೋಜಿತ ಕಾರ್ಯದಡಿಯಲ್ಲಿ ಎ.ಪಿ.ಆರ್.ಓ.ನ ರೋವರ್ ವಿಭಾಗ ಸಂಬಂಧ ಎಲ್ಲಾ ಅಂಶಗಳನ್ನು ಕ್ರೋಢೀಕರಿಸಿ 2004ರಷ್ಟು ಹಿಂದೆಯೇ ಮಾಜಿ ಸ್ಥಾನಿಕ ಆಯುಕ್ತರೂ, ರೋವರ್ ವಿಭಾಗದ ಹಿರಿಯ ವುಡ್‌ಬ್ಯಾಡ್ಜ್‌ಧಾರಕರೂ ಆದ ಶ್ರೀ ರಾ. ಚಂದ್ರಶೇಖರನ್‌ರವರ ಮಾರ್ಗದರ್ಶನದಲ್ಲಿ ಕನ್ನಡಕ್ಕೆ ಅನುವಾದ ಮಾಡಿ ರೋವರ್ ವಿಭಾಗದ ಬೆಳವಣಿಗೆಗೆ ಅನುಕೂಲ ಮಾಡಿದರು. ಶ್ರೀ ಶಂಕರ್ ಅವರ ಮೂಲ ಅನುವಾದವನ್ನು ಆದಷ್ಟೂ ಉಳಿಸಿಕೊಂಡು ಇತ್ತೀಚಿನ ತಿದ್ದುಪಡಿಗಳನ್ನು ಅಳವಡಿಸಿ ಶ್ರೀ ರಾ. ಚಂದ್ರಶೇಖರನ್ ಅವರು ಇದೀಗ ಪರಿಷ್ಕರಿಸಿರುತ್ತಾರೆ. ಇವರಿಬ್ಬರಿಗೂ ಅಭಿನಂದನೆಗಳು.

ರೋವರ್ ವಿಭಾಗದ ಲೀಡರುಗಳಿಗೂ, ರೋವರ್‌ಗಳಿಗೂ ಈ ನಿಯಮಾವಳಿಯು ಅತ್ಯುಪಯುಕ್ತವಾಗಿದ್ದು, ವಿಭಾಗದ ಗುಣಾತ್ಮಕ ಹಾಗೂ ಗಣನಾತ್ಮಕ ವಿಕಾಸಕ್ಕೆ ಪರಿಣಾಮಕಾರಿ ಸಾಧನವಾಗಲೆಂದು ಹಾರೈಸುತ್ತೇನೆ.

**ಪಿ.ಜಿ.ಆರ್. ಸಿಂಧ್ಯ**

# ಆಶಯ ನುಡಿ

ಸರ್ಕಾರದ ಆಡಳಿತದಲ್ಲಿ ಸಾಮಾಜಿಕ ವ್ಯವಸ್ಥೆಯಿರಲಿ, ಸಾಂಸ್ಥಿಕ ನಿರ್ವಹಣೆಯಿರಲಿ–ನಿರ್ವಾಹಕರಿಗೆ ಅವುಗಳ ಗುರಿ, ನೀತಿ, ನಿಯಮ ಮತ್ತು ಸಂಘಟನೆಗಳ ಬಗೆಗೆ ಪೂರ್ಣವಾದ ಜ್ಞಾನವಿರಬೇಕಾಗುತ್ತದೆ. ಅಂತಹ ಜ್ಞಾನವಿಲ್ಲದೆ ಇದ್ದಾಗ ನಿರ್ವಹಣೆಯಲ್ಲಿ ಕುಂದು–ಕೊರತೆಗಳು ಕಾಣಿಸಿಕೊಳ್ಳುತ್ತವೆ. ಅದರಲ್ಲೂ ಸ್ಕೌಟ್ಸ್ ಮತ್ತು ಗೈಡ್ಸ್‌ನಂತಹ ಸ್ವಯಂಸೇವಾ ಸಂಸ್ಥೆಗಳ ಚಟುವಟಿಕೆಗಳಲ್ಲಿ ಸಕ್ರಿಯವಾಗಿ ಪಾಲುಗೊಳ್ಳುವ ವಿವಿಧ ಹಂತದ ಶಿಕ್ಷಕರು ಮತ್ತು ತರಬೇತುದಾರರಿಗಂತೂ ಈ ಅರಿವು ಅತ್ಯಂತ ಅಗತ್ಯವಾಗುತ್ತದೆ.

ಕರ್ನಾಟಕ ರಾಜ್ಯ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆ ಕ್ಷೇತ್ರ ಕಾರ್ಯನಿರ್ವಾಹಕರಿಗೆ ಅಗತ್ಯವಾದ ಮಾಹಿತಿ ಜ್ಞಾನ ಒದಗಿಸುವ ಆಶಯದಿಂದ ನಾನಾ ರೂಪದ ಪುಸ್ತಕಗಳನ್ನು ಪ್ರಕಟಿಸುತ್ತಿದೆ. ಶೈಕ್ಷಣಿಕ ಮಹತ್ವದ ಈ ಪುಸ್ತಕಗಳನ್ನು ಚಳವಳಿಯಲ್ಲಿ ಸುದೀರ್ಘ ಅನುಭವವಿರುವ ಕ್ಷೇತ್ರತಜ್ಞರೇ ರಚಿಸುತ್ತಾರೆ. ಕೆಲವು ಸಂದರ್ಭಗಳಲ್ಲಿ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್‌ನ ಕೇಂದ್ರ ಸಂಸ್ಥೆಯ ಪ್ರಕಟಣೆಗಳನ್ನು ಕನ್ನಡಕ್ಕೆ ಅನುವಾದಿಸಿ ಕೊಡಲಾಗುತ್ತಿದೆ.

ಪ್ರಸ್ತುತ "ಗುರಿ, ನೀತಿ, ನಿಯಮ ಮತ್ತು ಸಂಘರ್ಷಣೆ" ಕೃತಿಯು ರೋವರ್ ವಿಭಾಗಕ್ಕೆ ಸಂಬಂಧಿಸಿದ್ದು, ಇದನ್ನು ಮೂಲ ಇಂಗ್ಲಿಷಿನಿಂದ ಕನ್ನಡಕ್ಕೆ ಅನುವಾದ ಮಾಡಿರುವ ಶ್ರೀ ಎ.ಎಂ. ಶಂಕರ್ ಮತ್ತು ಪರಿಷ್ಕರಣೆ ಮಾಡಿರುವ ಶ್ರೀ ರಾ. ಚಂದ್ರಶೇಖರನ್ ಅವರಿಗೆ ನನ್ನ ಅಭಿನಂದನೆಗಳು.

ಸ್ಕೌಟ್ಸ್ ಮತ್ತು ಗೈಡ್ಸ್ ಚಳವಳಿಯ ಘನತೆ ಮತ್ತು ಗೌರವಗಳ ದೃಷ್ಟಿಯಿಂದ ಚಳವಳಿಯ ಬಂಧುಗಳೆಲ್ಲ ಸಂಸ್ಥೆಯ ಪ್ರಕಟಣೆಗಳನ್ನು ಶ್ರದ್ಧಾಸಕ್ತಿಯಿಂದ ಓದಿ, ಅವುಗಳ ಪ್ರಯೋಜನ ಪಡೆದುಕೊಳ್ಳುವಂತಾಗಲಿ ಎಂದು ಆಶಿಸುತ್ತೇನೆ.

**- ಗೊ.ರು.ಚನ್ನಬಸಪ್ಪ**

# ಅಂತರಂಗದಿಂದ

ಮೈಸೂರಿನ ಸಂತಮೇರಿಯ ಶಾಲೆಯಲ್ಲಿ 1974ರಲ್ಲಿ ಮರಿಯಾಗಿ ಸಂಸ್ಥೆಗೆ ಸೇರಿ ಅದೇ ಶಾಲೆಯಲ್ಲಿ ಸ್ಕೌ॥ ಮಾ॥ ಶ್ರೀ ಬಿ. ಜಯಶಂಕರ್ ಅವರ ಮಾರ್ಗದರ್ಶನದಲ್ಲಿ ಸ್ಕೌಟ್ ಆಗಿ ಮುಂದುವರೆದೆ.

ಮುಂದೆ ಮುಕ್ತದಳ ಒಂದರಲ್ಲಿ ರೋವರ್ ಆದೆ. ಶ್ರೀಮತಿ ಮೈಥಿಲಿ ಸಂಪತ್ ಮತ್ತು ಶ್ರೀಮತಿ ವೈಲೆಟ್ ಕ್ಯಾಲೆಬ್‌ರವರುಗಳ ಪ್ರೇರಣೆಯಿಂದ ರಾಷ್ಟ್ರಪತಿ ರೋವರ್ ಪದಕ ಪಡೆಯಲು ಸಹಾಯವಾಯಿತು. ಸ್ಕೌಟಿಂಗ್‌ನಲ್ಲಿ ಆಸಕ್ತಿಯಿದ್ದ ಯುವಕರೆಲ್ಲರೂ ಸೇರಿ ಪ್ರೀಮಿಯರ್ ಸ್ಕೌಟ್ ಗುಂಪನ್ನು ಆರಂಭಿಸಿದೆವು. ಡಾ॥ ಕೆ.ಬಿ. ಗುರುಮೂರ್ತಿ ಅವರನ್ನು ಅಧ್ಯಕ್ಷರನ್ನಾಗಿ ಆಯ್ಕೆಮಾಡಿಕೊಂಡೆವು. ಅವರು ನೀಡಿದ ಪ್ರೋತ್ಸಾಹದಿಂದಾಗಿ ಹಂತ ಹಂತವಾಗಿ ಮುನ್ನಡೆಯಲು ಅನುವಾಯಿತು.

ನನ್ನ ಆಸಕ್ತಿಗೆ ನೀರೆರೆದು, ರೋವರ್ ವಿಭಾಗದಲ್ಲಿ ಪರಿಣಿತನಾಗಲು ಉತ್ತೇಜನ ನೀಡಿದ ಶ್ರೀ ಕುಂಜಿತ ಪಾದಂ, ಶ್ರೀ ಕೆ.ಬಿ. ಚಂದ್ರಶೇಖರನ್ ನಾಯರ್, ಶ್ರೀ ಟಿ.ಎಸ್.ಲೂಕಾಸ್, ಶ್ರೀ ಚಿನ್ನಸ್ವಾಮಿರೆಡ್ಡಿ, ಪ್ರೊ॥ ಎಂ.ಎಸ್. ಅಪ್ಪ, ದಿ॥ ಮು. ವೆಂಕಟಕೃಷ್ಣಪ್ಪ, ಶ್ರೀ ರಾ. ಚಂದ್ರಶೇಖರನ್, ಶ್ರೀ ನಾರಾಯಣ ಶೆಟ್ಟರು, ಇವರೆಲ್ಲರಿಗೂ ನಾನು ಋಣಿ.

ಕಬ್ ಬುಲ್‌ಬುಲ್‌ಗಳಿಗೆ ಹಾಗೂ ಸ್ಕೌಟ್ ಗೈಡ್‌ಗಳು ನೀಡುವ ರಾಜ್ಯ ಮಟ್ಟದ ಪುರಸ್ಕಾರಗಳ ರೀತಿಯಲ್ಲಿಯೇ ರೋವರ್, ರೇಂಜರ್‌ಗಳಿಗೆ ಮಾನ್ಯ ರಾಜ್ಯಪಾಲರು ಪುರಸ್ಕರಿಸಬೇಕೆಂಬ ಕೋರಿಕೆಯನ್ನು ಕಾರ್ಯರೂಪಕ್ಕೆ ತರಲು ನನ್ನ ಅಳಿಲು ಪಾತ್ರ ನಿರ್ವಹಿಸಿದೆ. ಅದೀಗ ನಿಯಮಾವಳಿಯಲ್ಲಿಯೂ ಅಡಕವಾಗಿರುವುದು ಹೆಮ್ಮೆಯ ವಿಷಯ.

ರಾಜ್ಯ ಮುಖ್ಯ ಆಯುಕ್ತರಾಗಿದ್ದ ಶ್ರೀ ಕೊ.ಬ. ಷಣ್ಮುಖಪ್ಪನವರು ನೀಡಿದ ಉತ್ತೇಜನದಿಂದ ಕರ್ನಾಟಕದ ರೋವರ್ ವಿಭಾಗಕ್ಕೆ ಅತಿ ಅವಶ್ಯಕವಾಗಿರುವ ಎ.ಪಿ.ಆರ್.ಓ. 2ರ ರೋವರ್ ವಿಭಾಗವನ್ನು ಕನ್ನಡಕ್ಕೆ ಅನುವಾದಿಸಲು

ಸಾಧ್ಯವಾಯಿತು. ರಾಜ್ಯದ ಪ್ರಥಮ ರೋವರ್ ಸ್ಕೌಟ್ ನಾಯಕರ ತರಬೇತಿದಾರನಾಗಲು ಸಾಧ್ಯವಾಯಿತು.

ಈ ಪುಸ್ತಕದ ಕರಡು ಪ್ರತಿಯನ್ನು ಕೂಲಂಕಷವಾಗಿ ಪರಿಶೀಲಿಸಿ ಸಲಹೆಗಳನ್ನು ನೀಡಿ, ತಿದ್ದುವಲ್ಲಿ ಸಹಕರಿಸಿದ ಮತ್ತೆ ಈಗ ಎರಡನೆಯ ಮುದ್ರಣಕ್ಕೆ ಇತ್ತೀಚಿನ ಬದಲಾವಣೆಗಳನ್ನು ಅಳವಡಿಸಿಕೊಟ್ಟಿರುವ ಶ್ರೀ ರಾ. ಚಂದ್ರಶೇಖರನ್‌ರವರಿಗೆ ವಂದನೆಗಳು.

ಈ ನನ್ನ ಕಿರುಹೊತ್ತಿಗೆಯು ರಾಜ್ಯ ಸಂಸ್ಥೆಯ ಎರಡನೆಯ ಮುದ್ರಣದ ಪ್ರಕಟಣೆಯಾಗಿ ಪ್ರಕಾಶಗೊಳ್ಳುತ್ತಿರುವುದು ನನಗೆ ಹೆಮ್ಮೆಯ ವಿಷಯವಾಗಿದೆ. ರಾಜ್ಯ ಸಂಸ್ಥೆಗೆ ಆಭಾರಿಯಾಗಿದ್ದೇನೆ.

ಈ ಪುಸ್ತಕಕ್ಕೆ ಮುನ್ನುಡಿಯನ್ನು ತುಂಬು ಮನಸ್ಸಿನಿಂದ ನೀಡಿರುವ ಇಂದಿನ ಮುಖ್ಯ ಆಯುಕ್ತರಾದ ಶ್ರೀ ಪಿ.ಜಿ.ಆರ್. ಸಿಂಧ್ಯ ಅವರಿಗೆ ನನ್ನ ಅನಂತ ಕೃತಜ್ಞತೆಗಳು. ಪ್ರತ್ಯಕ್ಷವಾಗಿ ಮತ್ತು ಪರೋಕ್ಷವಾಗಿ ನನ್ನ ಶ್ರೇಯೋಭಿವೃದ್ಧಿಗಾಗಿ ಮಿಡಿಯುವ ಹಿತೈಷಿಗಳಿಗೂ, ಮುದ್ರಕರಿಗೂ ಮತ್ತು ಪುಸ್ತಕವನ್ನು ಬಳಸಿಕೊಳ್ಳುತ್ತಿರುವ ನಿಮಗೂ ನನ್ನ ಸವಿನಯ ನಮನಗಳು.

**ಶಂಕರ್ ಎ.ಎಂ.**

# ವಿಷಯಸೂಚಿಕೆ

# ಅಧ್ಯಾಯ–1

(ಮೂಲದಲ್ಲಿ ಅಧ್ಯಾಯ–3)

# ರೋವರ್ ವಿಭಾಗ

## 14 ಕಾರ್ಯಕ್ರಮ ಆದರ್ಶಗಳು

### ಸ್ಕೌಟಿಂಗ್ (ರೋವರ್ ವಿಭಾಗದ) ಅಂತಿಮ ಶೈಕ್ಷಣಿಕ ಉದ್ದೇಶಗಳು

ಯುವಕರ ಮೂರೂ ವಯೋಮಾನಗಳಲ್ಲಿ (ಮರಿಗಳು, ಸ್ಕೌಟ್‌ಗಳು, ರೋವರ್‌ಗಳು) ಜೀವನಕ್ಕಾಗಿ ಶಿಕ್ಷಣವನ್ನು ಒದಗಿಸುವುದು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್‌ನ ಉದ್ದೇಶವಾಗಿದೆ. ಸಂಸ್ಥೆಯು ನೀಡುವ ಬಾಲಕರ ಕಾರ್ಯಕ್ರಮವನ್ನು ಪೂರ್ಣಗೊಳಿಸುವ ವೇಳೆಗೆ ಈ ಕೆಳಕಾಣಿಸಿರುವ ಆದರ್ಶಗಳನ್ನು ಪಾಲಿಸಲು ರೋವರ್ ಸ್ಕೌಟ್ ಶಕ್ತನಾಗಿರುವುದಾಗಿ ಭಾವಿಸುತ್ತದೆ.

1. ಸ್ಕೌಟಿಂಗ್‌ನ್ನು ಜೀವನದ ವಿಧಾನವನ್ನಾಗಿ ಮಾಡಿಕೊಳ್ಳುವುದು.
2. ಸಕ್ರಿಯ ನಾಗರಿಕನಾಗಿ ಭಾಗವಹಿಸುವುದು.
3. ತನ್ನ ತಾಂತ್ರಿಕ ಹಾಗೂ ಇತರೆ ಕೌಶಲಗಳನ್ನು ಉತ್ತಮಪಡಿಸಿಕೊಂಡು ಸ್ವಾವಲಂಬಿಯಾಗುವುದು ಮತ್ತು ಇತರರಿಗೆ ಉಪಯುಕ್ತನಾಗಿರುವುದು.
4. ತಾನು ಸ್ವಾಭಿಮಾನಿಯಾಗಿದ್ದುಕೊಂಡು ಇತರರ ವ್ಯಕ್ತಿತ್ವ ಮತ್ತು ಅನುಭವಗಳಿಗೆ ಗೌರವ ನೀಡುವಂತಹ ವಾಸ್ತವಿಕ ವ್ಯಕ್ತಿಯಾಗಿ ರೂಪುಗೊಳ್ಳುವುದು.
5. ತನ್ನ ಸಮುದಾಯದ ಅಭಿವೃದ್ಧಿಯ ಬಗ್ಗೆ ತನ್ನ ಜವಾಬ್ದಾರಿಯನ್ನು ಅರಿತವನಾಗಿ, ವೈಯಕ್ತಿಕವಾಗಿ ಹಾಗೂ ಸಾಮೂಹಿಕವಾಗಿ ಸಮುದಾಯ ಅಭಿವೃದ್ಧಿ ಕಾರ್ಯಕ್ರಮಗಳನ್ನು ಕೈಗೊಳ್ಳುವುದು.
6. ಸಹ ಮಾನವರು ಮತ್ತು ದೇವರು / ಧರ್ಮಕ್ಕೆ ಸೇವೆ ಸಲ್ಲಿಸುವ ರೀತಿಯಲ್ಲಿ ಪರಿಶುದ್ಧ ಧಾರ್ಮಿಕ ಜೀವನವನ್ನು ನಡೆಸುವುದು.

7. ಮುಂದೆ ತನ್ನ ಜೀವನ ಸಂಗಾತಿಯನ್ನು ಆರಿಸಿಕೊಂಡು,* ಪರಸ್ಪರ ಅರ್ಥಮಾಡಿಕೊಂಡು ಹೊಂದಿಕೆಯ ನೆಮ್ಮದಿಯ ಜೀವನ ನಡೆಸುವುದು.
8. ಸಾರ್ವಜನಿಕ ಸ್ವತ್ತನ್ನು ಕಾಪಾಡಲು ಶಕ್ತ್ಯಾನುಸಾರ ಶ್ರಮಿಸುವುದು.
9. ದೇಶಕ್ಕೆ ತನ್ನ ಕರ್ತವ್ಯವನ್ನು ಪಾಲಿಸಲು ತಯಾರಾಗುವುದು ಮತ್ತು ವಿಶ್ವ ಸೋದರತೆಯ ಬಗ್ಗೆ ಒಲವು ಮೂಡಿಸಿಕೊಳ್ಳುವುದು. ಎಂದರೆ ಮಾನವ ಜನಾಂಗದ ಶಾಂತಿ ಸೌಹಾರ್ದತೆಗಳನ್ನು ಕಾಪಾಡಿಕೊಳ್ಳುವುದು.
10. ಸಕಾರಾತ್ಮಕ ಭಾವನೆಯನ್ನು ಬೆಳೆಸಿಕೊಂಡು, ಇತರರ ಒಳಿತಿಗಾಗಿ ಸಾಕಷ್ಟು ರೋವರಿಂಗ್ ಕೌಶಲಗಳು ಮತ್ತು ಮೌಲ್ಯಗಳನ್ನು ಅಭಿವೃದ್ಧಿಪಡಿಸಿ ಕೊಳ್ಳುವುದು.
11. ಮಾನವೀಯ ಮೌಲ್ಯಗಳ ಬಗ್ಗೆ ಒಲವುಳ್ಳವನಾಗಿ, ರಾಷ್ಟ್ರೀಯ ಪರಂಪರೆ ಹಾಗೂ ಸಂಸ್ಕೃತಿಗಳನ್ನು ಉಳಿಸಿಕೊಳ್ಳಲು ಶ್ರಮಿಸುವುದು.
12. ರಾಷ್ಟ್ರೀಯ ಆದ್ಯತೆಯ ಕಾರ್ಯಕ್ರಮಗಳೆನಿಸಿದ ರಾಷ್ಟ್ರೈಕ್ಯತೆ, ಜನಸಂಖ್ಯಾ ಶಿಕ್ಷಣ, ಸಂರಕ್ಷಣೆ, ಪಾಕೀಜು ವ್ಯವಸ್ಥೆ ಇತ್ಯಾದಿ ಕಾರ್ಯಕ್ರಮಗಳನ್ನು ರೂಪಿಸುವುದು ಮತ್ತು ಭಾಗವಹಿಸುವುದು.
13. ಗುಂಪಿನೊಡನೆ ಬೆರೆತು ಕೆಲಸ ಮಾಡಲು ಒಲವುಳ್ಳ ಕೌಶಲಯುತ, ತಾಂತ್ರಿಕ ನಾಯಕನಾಗುವುದು.
14. ಸಾಮಾನ್ಯವಾದ ಪ್ರಾಪಂಚಿಕ ವಿದ್ಯಮಾನಗಳ ಬಗ್ಗೆ ಸಾಕಷ್ಟು ಅರಿವುಳ್ಳವನಾಗಿರುವುದು.

## 1. ರೋವರ್

ಈವರೆಗೆ ಸ್ಕೌಟ್ ಆಗಿರಲಿ ಇಲ್ಲದಿರಲಿ 15 ವರ್ಷ ಸಂಪೂರ್ಣಗೊಂಡು 25 ವರ್ಷದೊಳಗಿರುವ ಭಾರತದ ನಾಗರಿಕರನ್ನು ರೋವರ್ ಉಮೇದುವಾರರನ್ನಾಗಿ ಸೇರಿಸಿಕೊಳ್ಳಬಹುದು. 25 ವರ್ಷ ಸಂಪೂರ್ಣಗೊಂಡ ಯುವಕರು ರೋವರ್ ಆಗಲು ಅನರ್ಹರು. ಆದರೆ ಅವರು 35 ವರ್ಷಗಳವರೆಗೆ ಸೇವಾನಿರತ ರೋವರ್ ಆಗಿ ಮುಂದುವರೆಯಬಹುದು.

---

* ಅನುವಾದಕರ ಅಭಿಪ್ರಾಯದಲ್ಲಿ (ಮಾರ್ಗದರ್ಶಕರೂ ಸೇರಿದಂತೆ) ಭಾರತೀಯ ಸಂಪ್ರದಾಯದಂತೆ ಹಿರಿಯರ ಮನಸ್ಸು ನೋಯಿಸದಂತೆ ಅವರ ಮನವೊಪ್ಪಿಸಬೇಕಾಗುತ್ತದೆ. ಪಾಶ್ಚಿಮಾತ್ಯ ಹಿನ್ನೆಲೆಯಲ್ಲಿ ಇಬ್ಬರು ವ್ಯಕ್ತಿಗಳು ಒಂದಾಗುತ್ತಾರೆ. ಭಾರತೀಯ ಸಾಂಸ್ಕೃತಿಕ ಹಿನ್ನೆಲೆಯಲ್ಲಿ ಹಲವಾರು ಕುಟುಂಬಗಳು ಜೊತೆ ಜೊತೆ ಒಂದಾಗುತ್ತವೆ.

ರಾಜ್ಯ ಮುಖ್ಯ ಆಯುಕ್ತರ ವಿಶೇಷ ಅನುಮತಿಯೊಂದಿಗೆ ಅಗತ್ಯವಾದ ಸಂದರ್ಭದಲ್ಲಿ 25 ವರ್ಷಕ್ಕೆ ಮುಂಚೆ ದೀಕ್ಷೆ ವಹಿಸಲಾದವರು. ಅಲ್ಲಿಂದ ಮುಂದೆ 3 ವರ್ಷಗಳವರೆಗೆ (ಎಂದರೆ 25ರಿಂದ 28 ವರ್ಷದ ವರೆಗೆ) ರೋವರ್ ಆಗಿ ಮುಂದುವರಿಯಬಹುದು. ಈ ಅವಧಿಯಲ್ಲಿ ವಿಶೇಷ ಅನುಮತಿ ಪಡೆದಾತನು ರಾಷ್ಟ್ರಪತಿ ರೋವರ್ ಪದಕ ಪಡೆಯಲು ಅರ್ಹನಾಗುತ್ತಾನೆ.

## 2. ರೋವರ್ ತಂಡ

a) ಒಂದು ರೋವರ್ ತಂಡದಲ್ಲಿ, 8 ರೋವರ್‌ಗಳಿಗಿಂತ ಕಡಿಮೆ ಇರಬಾರದು. 24 ರೋವರ್‌ಗಳಿಗೆ ಮೀರಬಾರದು.

b) ಪ್ರತಿ ರೋವರ್ ತಂಡವೂ ಒಂದು ಗುಂಪಿನ ಘಟಕವಾಗಿರಬಹುದು. ಅಂತಹ ಗುಂಪಿನಲ್ಲಿ ಮರಿಗಳ ಹಿಂಡು, ಸ್ಕೌಟ್ ದಳವೂ ಇರಬಹುದು. ಆ ರೀತಿಯಲ್ಲಿ ಮೂರು ಘಟಕಗಳ ಗುಂಪು ಆಗದಿದ್ದಲ್ಲಿ ರೋವರ್ ತಂಡವನ್ನೇ ಗುಂಪನ್ನಾಗಿ ಪರಿಗಣಿಸಲಾಗುತ್ತದೆ.

c) ಪ್ರತಿಯೊಂದು ರೋವರ್ ತಂಡವೂ ವಿಧಿಪೂರ್ವಕವಾಗಿ ನೋಂದಾಯಿಸಲ್ಪಟ್ಟಿರಬೇಕು.

d) ಪ್ರತಿಯೊಂದು ರೋವರ್ ತಂಡಕ್ಕೂ ಒಂದು ಹೆಸರಿರುತ್ತದೆ. ಗುಂಪಿನ ಘಟಕವಾಗಿದ್ದರೆ ಆ ಗುಂಪಿನ ಹೆಸರನ್ನು ಹೊಂದಿರುತ್ತದೆ. ಗುಂಪು ಸ್ಥಳೀಯ ಅಥವಾ ಪ್ರಾಯೋಜಕ ಸಂಸ್ಥೆಯ ಹೆಸರನ್ನು ಅಥವಾ ಭಾರತದ ಗಣ್ಯಪುರುಷ ನಾಯಕರ ಹೆಸರನ್ನು ಹೊಂದಿರಬಹುದು. ಪ್ರತಿಯೊಂದು ಗುಂಪೂ ಸ್ಥಳೀಯ ಅಥವಾ ಜಿಲ್ಲಾ ಸಂಸ್ಥೆಯಿಂದ ಕ್ರಮಸಂಖ್ಯೆಯನ್ನು ಪಡೆದಿರುತ್ತದೆ.

## 3. ರೋವರ್ ಸ್ಕೌಟ್ ನಾಯಕ ಮತ್ತು ಸಹಾಯಕ ರೋವರ್ ಸ್ಕೌಟ್ ನಾಯಕ

i) ಪ್ರತಿಯೊಂದು ರೋವರ್ ತಂಡಕ್ಕೂ ಒಬ್ಬ ರೋವರ್ ಸ್ಕೌಟ್ ನಾಯಕ ಇರಬೇಕು. ಒಬ್ಬರು ಅಥವಾ ಹೆಚ್ಚಿನ ಸಹಾಯಕ ರೋವರ್ ಸ್ಕೌಟ್ ನಾಯಕರು ಇರಬಹುದು. ಪ್ರತಿ ಆರು ರೋವರ್‌ಗಳಿಗೆ ಒಬ್ಬ ಸಹಾಯಕ ರೋವರ್ ಸ್ಕೌಟ್ ನಾಯಕರಿರಬೇಕು.

ii) ಸಂಬಂಧಪಟ್ಟ ಸ್ಥಳೀಯ ಅಥವಾ ಜಿಲ್ಲಾ ಸಂಸ್ಥೆ ಹಾಗೂ ಜಿಲ್ಲಾ ಮುಖ್ಯ ಆಯುಕ್ತರ ಶಿಫಾರಸ್ಸಿನ ಮೇರೆಗೆ ರಾಜ್ಯ ಮುಖ್ಯ ಆಯುಕ್ತರು ರೋವರ್ ಸ್ಕೌಟ್ ನಾಯಕ ಮತ್ತು ಸಹಾಯಕ ರೋವರ್ ಸ್ಕೌಟ್ ನಾಯಕರನ್ನು ನೇಮಿಸುತ್ತಾರೆ. ನೇಮಿಸಲ್ಪಟ್ಟ ಪ್ರತಿ ರೋವರ್ ಸ್ಕೌಟ್ ನಾಯಕ ಮತ್ತು ಸಹಾಯಕ ರೋವರ್ ಸ್ಕೌಟ್ ನಾಯಕರಿಗೆ ಸನ್ನದನ್ನು ನೀಡಲಾಗುತ್ತದೆ.

iii) ಗುಂಪಿನ ನಾಯಕರ ಸಾಮಾನ್ಯ ಮೇಲ್ವಿಚಾರಣೆಯಲ್ಲಿ ರೋವರ್ ಸ್ಕೌಟ್ ನಾಯಕರು ಮತ್ತು ಸಹಾಯಕ ರೋವರ್ ಸ್ಕೌಟ್ ನಾಯಕರು ಕಾರ್ಯನಿರ್ವಹಿಸಬೇಕು. ರೋವರ್ ಸ್ಕೌಟ್ ನಾಯಕರು ಸಾಮಾನ್ಯವಾಗಿ ರೋವರ್ ತಂಡದ ಕಾರ್ಯಕ್ರಮಗಳ ಹೊಣೆ ಹೊಂದಿರುತ್ತಾರೆ. ತಂಡದ ಶಿಸ್ತು, ವ್ಯವಹಾರ ಮತ್ತು ಹಣಕಾಸಿನ ವ್ಯವಹಾರಗಳನ್ನು ತಂಡದ ಪರಿಷತ್ತಿಗೆ ವಹಿಸುತ್ತಾರೆ. ಸಹಾಯಕ ರೋವರ್ ಸ್ಕೌಟ್ ನಾಯಕರು ರೋವರ್ ಸ್ಕೌಟ್ ನಾಯಕರಿಗೆ ಸಹಕರಿಸುತ್ತಾರೆ.

## 4. ರೋವರ್ ಸ್ಕೌಟ್ ನಾಯಕ ಮತ್ತು ಸಹಾಯಕ ರೋವರ್ ಸ್ಕೌಟ್ ನಾಯಕರ ಅರ್ಹತೆ

i. a) 25 ವರ್ಷ ಸಂಪೂರ್ಣಗೊಂಡಾತನು ರೋವರ್ ಸ್ಕೌಟ್ ನಾಯಕನಾಗಿ ನೇಮಿಸಲು ಅರ್ಹನಾಗಿರುತ್ತಾನೆ. ಸಂಬಂಧಪಟ್ಟ ಜಿಲ್ಲಾ ಆಯುಕ್ತರ ವಿಶೇಷ ಶಿಫಾರಸ್ಸಿನ ಮೇರೆಗೆ 21 ವರ್ಷ ಸಂಪೂರ್ಣಗೊಂಡಾತನೂ ರೋವರ್ ಸ್ಕೌಟ್ ನಾಯಕನಾಗಿ ನೇಮಿಸಲ್ಪಡಬಹುದು.

b) 21 ವರ್ಷ ಸಂಪೂರ್ಣಗೊಂಡಾತನು ಸಹಾಯಕ ರೋವರ್ ಸ್ಕೌಟ್ ನಾಯಕನಾಗಿ ನೇಮಿಸಲ್ಪಡಬಹುದು.

ii. ಯಾವುದೇ ಕ್ಷೇತ್ರದಲ್ಲಿ ಪದವಿ ಅಥವಾ ತತ್ಸಮ ವಿದ್ಯಾರ್ಹತೆ ಉಳ್ಳವನಾಗಿರುವುದು ಉತ್ತಮ. ವಿಶೇಷ ಸಂದರ್ಭಗಳಲ್ಲಿ ರಾಜ್ಯ ಪ್ರಧಾನ ಆಯುಕ್ತರ ಆಮೋದನೆ ಮೇರೆಗೆ ಮೆಟ್ರಿಕ್ಯುಲೇಷನ್ (ಹತ್ತನೆಯ ತರಗತಿಯಲ್ಲಿ ಉತ್ತೀರ್ಣನಾಗಿರುವುದು)ಅಥವಾ ತತ್ಸಮಾನ ಪ್ರಮಾಣಪತ್ರವನ್ನು ಪಡೆದಿದ್ದರೂ ನಡೆಯುತ್ತದೆ.

iii. ಉತ್ತಮ ಗುಣ, ನಡತೆ ಹಾಗೂ ಚಾರಿತ್ರ್ಯ ಹೊಂದಿದವನಾಗಿರಬೇಕು.

iv. ಸ್ಕೌಟ್ ಸಂಸ್ಥೆಯ ಬಗ್ಗೆ ಮತ್ತು ಅದರ ವಿಧಾನಗಳ ಬಗ್ಗೆ ತಿಳಿದಿರಬೇಕು, ಸಂಸ್ಥೆಯ ಧಾರ್ಮಿಕ ಮತ್ತು ನೈತಿಕ ನೀತಿಗಳನ್ನು ಗೌರವಿಸಬೇಕು, ಎ.ಪಿ.ಆರ್.ಓ.ವನ್ನು ಅರ್ಥಮಾಡಿಕೊಂಡಿರಬೇಕು. ಇವುಗಳನ್ನು ಕಾರ್ಯಕ್ರಮದಲ್ಲಿ ಅನ್ವಯಿಸಿಕೊಳ್ಳಬೇಕು.

v. ಯುವಕರೊಂದಿಗೆ ವ್ಯವಹರಿಸುವ ವಿಶೇಷ ಸಾಮರ್ಥ್ಯವನ್ನು ಹೊಂದಿರಬೇಕು.

vi. ನೇಮಿತನಾದ ದಿನದಿಂದ 2 ವರ್ಷಗಳೊಳಗೆ ರಾಷ್ಟ್ರೀಯ ಸಂಸ್ಥೆಯವರು ಸೂಚಿಸಿರುವ ತರಬೇತಿಯನ್ನು ತೃಪ್ತಿಕರವಾಗಿ ಸಂಪೂರ್ಣಗೊಳಿಸಿರಬೇಕು.

vii. ರೋವರ್ ತಂಡಕ್ಕಾಗಿ ಬೇರೆಯದೇ ಆದ ರೋವರ್ ಕೋಣೆಯನ್ನು ಪಡೆದು ಉಪಯೋಗಿಸುವಂತಹವನಾಗಿರಬೇಕು.

viii. ಸಮಾಜದ ಸಾಮಾಜಿಕ ಅವಶ್ಯಕತೆಗಳ ಬಗ್ಗೆ ಸಾಮಾನ್ಯ ಜ್ಞಾನ ಹೊಂದಿದವನಾಗಿರಬೇಕು.

## 5. ಸಮವಸ್ತ್ರ

**ರೋವರ್ ಸ್ಕೌಟ್ ನಾಯಕ ಮತ್ತು ಸಹಾಯಕ ರೋವರ್ ಸ್ಕೌಟ್ ನಾಯಕರ ಸಮವಸ್ತ್ರ**

ಅ) **ಷರ್ಟ್:** ಪೂರ್ಣ ತೋಳು ಅಥವಾ ಅರ್ಧತೋಳಿರುವ ಭುಜಕರ್ಣ ಇರುವ ಹಾಗೂ ಮೇಲುಹೊದಿಕೆ ಇರುವ ಎರಡು ಜೇಬುಗಳುಳ್ಳ ಬೂದುಬಣ್ಣದ ಷರ್ಟ್. ಚಳಿ ವಾತಾವರಣದಲ್ಲಿ ತೋಳನ್ನು ಬಿಡಿಸಬಹುದು.

ಆ) **ಪ್ಯಾಂಟು:** ಕಡು ನೀಲಿ ಬಣ್ಣದ ಪ್ಯಾಂಟನ್ನು ಧರಿಸಬೇಕು.

ಇ) **ತಲೆಯುಡಿಗೆ:** ರಾಷ್ಟ್ರೀಯ ಸಂಸ್ಥೆಯು ಸರಬರಾಜು ಮಾಡಿದ ಸಂಸ್ಥೆಯ ಪದಕ ಹೊಂದಿದ ಕಡುನೀಲಿ ಬಣ್ಣದ ಬೆರ್ರೆಯನ್ನು ಧರಿಸಬೇಕು. ಸಿಖ್ ಮತದವರು ಸಮಾರಂಭಗಳಲ್ಲಿ ಮಾತ್ರ ಕಡು ನೀಲಿ ಬಣ್ಣದ ರುಮಾಲನ್ನು ಸಂಸ್ಥೆಯ ಟೋಪಿಯ ಪದಕದೊಂದಿಗೆ ಧರಿಸಬಹುದು.

ಈ) **ಬೆಲ್ಟ್:** ರಾಷ್ಟ್ರೀಯ ಸಂಸ್ಥೆಯವರು ಸರಬರಾಜು ಮಾಡುವ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯ ಚಿಲುಕ ಕಟ್ಟಿರುವ (ಬಕಲ್) ಬೂದು ನೈಲೆಕ್ಸ್ ಪಟ್ಟಿಯಾಗಿರಬೇಕು.

ಉ) **ಸ್ಕಾರ್ಫ್:** ಗುಂಪಿನ ಬಣ್ಣದ ಕಂಠವಸ್ತ್ರವಾಗಿರಬೇಕು. ಸ್ಥಳೀಯ ಅಥವಾ ಜಿಲ್ಲಾ ಸಂಸ್ಥೆಯವರಿಂದ ಅನುಮೋದಿತವಾಗಿರಬೇಕು. ಹಳದಿ, ಹಸಿರು, ನೇರಳೆ ಬಣ್ಣ ಆಗಿರಬಾರದು. ಸ್ಕಾರ್ಫ್ (ಕಂಠವಸ್ತ್ರ) ತ್ರಿಕೋಣಾಕೃತಿಯಲ್ಲಿದ್ದು ಅದರ ಎರಡು ಭುಜಗಳು 70ರಿಂದ 90 ಸೆಂ.ಮೀ. ಉದ್ದವಾಗಿರಬೇಕು. ಸ್ಕಾರ್ಫ್‌ಗೆ ಉಪಯೋಗಿಸುವ ವೋಗಲ್ (ಉಂಗುರವು) ಗಿಲ್‌ವೆಲ್ ವೋಗಲ್ ಆಗಿರಬಾರದು. ಇದು ಗುಂಪಿನ ನಮೂನೆಯೂ ಆಗಿರಬಹುದು.

ಊ) **ಭುಜ ಪದಕ:** ಭುಜಪದಕವು 6ರಿಂದ 8 ಸೆಂ.ಮೀ. ಉದ್ದ ಹಾಗೂ 1.5 ಸೆಂ.ಮೀ. ಅಗಲವಾಗಿದ್ದು ಬಿಳಿ ಬಣ್ಣದ್ದಾಗಿರಬೇಕು. ಗುಂಪಿನ ಕ್ರಮಸಂಖ್ಯೆ (ಇಚ್ಛಿಸಿದಲ್ಲಿ) ಗುಂಪಿನ/ಜಿಲ್ಲೆ/ರಾಜ್ಯದ ಹೆಸರು ಕೆಂಪು ಬಣ್ಣದಲ್ಲಿರಬೇಕು. ಎರಡೂ ಭುಜಗಳ ಹೊಲಿಗೆಯ ಕೆಳಗಡೆ ಧರಿಸಬೇಕು.

**ಸೂಚನೆ:** ಸಮುದ್ರ ಸ್ಕೌಟ್ ಅಥವಾ ವಾಯು ಸ್ಕೌಟ್ ಗುಂಪಿನ ಸದಸ್ಯರು ಭುಜಪದಕದ ಬದಲಿಗೆ (ರಾಷ್ಟ್ರೀಯ ಸಂಸ್ಥೆಯವರು ಒದಗಿಸಿರುವ) ಸಮುದ್ರ ಸ್ಕೌಟ್ ಅಥವಾ ವಾಯುಸ್ಕೌಟ್ ಎಂಬ ಬಿಳಿಯ ಪಟ್ಟಿಯ ಮೇಲೆ ಕೆಂಪು ಬಣ್ಣದ ಪದಗಳಿರುವ ಪಟ್ಟಿಯನ್ನು ಭುಜಗಳ ಮೇಲೆ ಎರಡೂ ಬದಿಗಳಲ್ಲಿ ಧರಿಸಬಹುದು.

ಋ) **ಸದಸ್ಯತ್ವ ಪದಕ:** ಎಡಜೇಬಿನ ಮಧ್ಯ ಪಟ್ಟಿಯ ಮೇಲೆ ಹಸಿರು ಬಣ್ಣದ ಪದಕವನ್ನು ಧರಿಸಬಹುದು. ಈ ಪದಕದಲ್ಲಿ ಹಸಿರು ಒಡಲಿನ ಮೇಲೆ ಹಳದಿ ಬಣ್ಣದ ತ್ರಿದಳ ಕಮಲದೊಳಗೆ, ಗೈಡ್‌ಗಳ ತ್ರಿಪತ್ರವೂ, ಭಾರತ ಲಾಂಛನ ಅಶೋಕ ಚಕ್ರವೂ ಇರುತ್ತದೆ.

ಎ) **ವಿಶ್ವಸ್ಕೌಟ್ ಪದಕ:** ಸಮವಸ್ತ್ರದ ಷರ್ಟಿನ ಬಲಜೇಬಿನ ಮೇಲೆ ಕಡ್ಡಾಯವಾಗಿ ಧರಿಸಬೇಕು.

ಏ) 1. **ರ್‍ಯಾಂಕ್ ಪದಕ:** ರೋವರ್ ಸ್ಕೌಟ್ ನಾಯಕರಾದವರು ಕೆಂಪು ಬಣ್ಣದ ಅಂಚಿನ ಕೆಂಪುಬಣ್ಣದ ಒಡಲಿನ ಮೇಲೆ, ಹಳದಿ ಬಣ್ಣದ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಲಾಂಛನವಿರುವ ಪದಕವನ್ನು ಎಡಜೇಬಿನ ಮೇಲ್ಭಾಗದಲ್ಲಿ ಜೇಬಿನ ಮೇಲುಹೊದಿಕೆಯ ಹೊಲಿಗೆಯಿಂದ 4 ಸೆಂ.ಮೀ. ಎತ್ತರದಲ್ಲಿ ಪದಕದ ತಳವು ಇರುವಂತೆ ಧರಿಸಬೇಕು. ಸಹಾಯಕ ರೋವರ್ ಸ್ಕೌಟ್ ನಾಯಕರು ಇದೇ ರೀತಿಯಲ್ಲಿ ಪದಕವನ್ನು ಧರಿಸುತ್ತಾರೆ. ಆದರೆ ಇವರ ಪದಕದಲ್ಲಿ ಕೆಂಪು ಅಂಚಿನ ಬದಲು ಹಸಿರು ಅಂಚು ಇರುತ್ತದೆ.

2. ರಾಷ್ಟ್ರೀಯ ಸಂಸ್ಥೆಯವರಿಂದ ಪೂರೈಸಲಾಗುವ "ದಿ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್" ಪಟ್ಟಿಯನ್ನು ಷರ್ಟಿನ ಬಲಭಾಗದ ಜೇಬಿನ ಮೇಲೆ ಧರಿಸಬೇಕು.

ಐ) **ಕಾಲುಚೀಲ:** ಕರಿಯ ಬಣ್ಣದ ಕಾಲುಚೀಲವನ್ನು ಧರಿಸಬೇಕು.

ಒ) **ಪಾದರಕ್ಷೆ:** ಲೇಸ್ ಇರುವ ಕರಿಯು ಬಣ್ಣದ (ಚರ್ಮದ ಅಥವಾ ಕ್ಯಾನ್‌ವಾಸ್) ಷೂ ಅನ್ನು ಧರಿಸಬೇಕು.

ಓ) **ಓವರ್ ಕೋಟ್, ಮಾಕಿನ್ ಟೋಪ್ಷ್ ಅಥವಾ ಜಾಕೆಟ್:** ಕಡುನೀಲಿ ಬಣ್ಣದ ಓವರ್ ಕೋಟ್, ಬ್ಲೇಸರ್ ಸ್ವೆಟರ್ ಅಥವಾ ಬೂದು ಬಣ್ಣದ ಜರ್ಸಿಯನ್ನು ಚಳಿಗಾಲದಲ್ಲಿ ಮಾತ್ರ ಧರಿಸಬಹುದು.

ಔ) **ಲೋಹದ ಪದಕ:** ಸಮವಸ್ತ್ರದಲ್ಲಿ ಇಲ್ಲದಿರುವಾಗ "ದಿ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್" ಲೋಹದ ಪದಕವನ್ನು ಧರಿಸಬಹುದು.

ಅಂ) **ಲ್ಯಾನ್ ಯಾರ್ಡ್:** ಬೂದು ಬಣ್ಣದ ಲ್ಯಾನ್ ಯಾರ್ಡನ್ನು ಕಂಠದ ಸುತ್ತಲೂ ಧರಿಸಿ, ಶಿಳ್ಳೆಯನ್ನು ಎಡಜೇಬಿನಲ್ಲಿ ಸೇರಿಸಬಹುದು.

ಅಃ) **ಹೊರಾಂಗಣ ಚಟುವಟಿಕೆಯ ವೇಳೆಯಲ್ಲಿ: ಐಚ್ಛಿಕ:** ಕಡುನೀಲಿ ಬಣ್ಣದ ಜೀನ್ಸ್/ ಟ್ರೌಜರ್ಸ್/ಷಾರ್ಟ್ಸ್ ಜೊತೆಗೆ ಸಾದಾ ಆಕಾಶ ನೀಲಿ ಬಣ್ಣದ ಕಾಲರ್ ಉಳ್ಳ ಟಿ–ಷರ್ಟ್. ಇದರ ಜೇಬಿನ ಮೇಲೆ ಸ್ಕೌಟ್ ಲಾಂಛನವನ್ನು ಮೇಲೊತ್ತಿರಬೇಕು. ಸ್ಕೌಟ್ ಮತ್ತು ಗೈಡ್ ಲಾಂಛನವಿರುವ ಕಡುನೀಲಿ ಬಣ್ಣದ ಪಿ–ಕ್ಯಾಪ್ ಧರಿಸಬಹುದು. ಹಿತಕರವಾದ ಷೂಸ್ ಧರಿಸಬಹುದು. ಹ್ಯಾವರ್ ಸ್ಯಾಕ್ (ಹೆಗಲು ಚೀಲ) ಮತ್ತು ರುಕ್ ಸ್ಯಾಕ್ (ಬೆನ್ನುಚೀಲ)ನ್ನು ಹೊತ್ತು ಹೋಗಬಹುದು.

1. **ಸಮುದ್ರ ರೋವರ್ ಸ್ಕೌಟ್ ಲೀಡರ್ ಮತ್ತು ಸಹಾಯಕ ಸಮುದ್ರ ಸಹಾಯಕ ರೋವರ್ ಸ್ಕೌಟ್ ಲೀಡರ್:** ಇವರುಗಳು RSL ಮತ್ತು ARSLಗಳಂತೆಯೇ ಸಮವಸ್ತ್ರ ಧರಿಸುತ್ತಾರೆ. ಜೊತೆಗೆ 4 ಸೆಂ.ಮೀ. ಉದ್ದದ ಸಮುದ್ರ ಸ್ಕೌಟ್ ಪದಕವನ್ನು ಬಲಜೇಬಿನ ಮೇಲ್ಭಾಗದಲ್ಲಿ ಧರಿಸುತ್ತಾರೆ.

2. **ವಾಯು ರೋವರ್ ಸ್ಕೌಟ್ ಲೀಡರ್ ಮತ್ತು ಸಹಾಯಕ ವಾಯು ರೋವರ್ ಸ್ಕೌಟ್ ಲೀಡರ್:** ಇವರುಗಳು RSL ಮತ್ತು ARSL

ಗಳಂತೆಯೇ ಸಮವಸ್ತ್ರ ಧರಿಸುತ್ತಾರೆ. ಜೊತೆಗೆ 4 ಸೆಂ.ಮೀ. ಅಗಲದ ಏರ್ ಸ್ಕೌಟ್ ಪದಕವನ್ನು ಬಲಜೇಬಿನ ಮೇಲ್ಭಾಗದಲ್ಲಿ ಧರಿಸುತ್ತಾರೆ.

6. **(a)(i)ಹಿರಿಯ ರೋವರ್ ಸಖ (Senior Rover Mate):**



ರೋವರ್ ಸಖರ ಪೈಕಿ ಒಬ್ಬರನ್ನು ಹಿರಿಯ ರೋವರ್ ಸಖನನ್ನಾಗಿ ನೇಮಿಸಬಹುದು. ಹಿರಿಯ ರೋವರ್ ಸಖನಾದವನು ರೋವರ್‌ನಂತೆಯೇ ಸಮವಸ್ತ್ರವನ್ನು ಧರಿಸುತ್ತಾನೆ. ಜೊತೆಗೆ ಎಡಜೇಬಿನ ಮೇಲೆ ಮದ್ಯದ ಪಟ್ಟಿಯ ಮೇಲೆ, ಸದಸ್ಯತ್ವದ ಪದಕದ ಹಿಂಭಾಗಕ್ಕೆ ಒಂದೂ ಉಳಿದ ಎರಡು ಅದರ ಎರಡು ಪಕ್ಕಗಳಿಗೂ ಉದ್ದುದ್ದವಾಗಿ ಬರುವಂತೆ 6 ಸೆಂ.ಮೀ. ಉದ್ದ 1.5 ಸೆಂ.ಮೀ. ಅಗಲದ ಹತ್ತಿಯ ಅಥವಾ ಉಣ್ಣೆಯ ಮೂರು ಕೆಂಪು ಪಟ್ಟಿಗಳನ್ನು ಧರಿಸುತ್ತಾನೆ. ಹಿರಿಯ ರೋವರ್ ಸಖನು ರೋವರ್ ಸ್ಕೌಟ್ ನಾಯಕರಿಗೆ ಸಹಾಯ ಮಾಡುತ್ತಾನೆ.

**(ii) ರೋವರ್ ಸಖ (Rover Mate):**



ವರ್ಷಕ್ಕೊಮ್ಮೆ ತಂಡದಿಂದ ಚುನಾಯಿಸಲ್ಪಟ್ಟವನು ರೋವರ್ ಸ್ಕೌಟ್ ನಾಯಕನ ಅನುಮೋದನೆ ಪಡೆದು ರೋವರ್ ಸಖ ಆಗುತ್ತಾನೆ. ಪ್ರತಿ 4ರಿಂದ 6 ರೋವರ್‌ಗಳಿಗೆ ಒಬ್ಬ ಸಖ ಇರುತ್ತಾನೆ. ರೋವರ್ ಸಖರು ರೋವರ್‌ಗಳು ಧರಿಸುವಂತೆಯೇ ಸಮವಸ್ತ್ರವನ್ನು ಧರಿಸುವುದರ ಜೊತೆಗೆ 6 ಸೆಂ.ಮೀ. ಉದ್ದ 1.5 ಸೆಂ.ಮೀ. ಅಗಲದ ಹತ್ತಿಯ ಅಥವಾ ಉಣ್ಣೆಯ ಎರಡು ಕೆಂಪು ಪಟ್ಟಿಗಳನ್ನು ಷರ್ಟಿನ ಎಡಜೇಬಿನ ಸದಸ್ಯತ್ವದ ಪದಕದ ಎರಡು ಬದಿಗಳಲ್ಲಿ ನೇರವಾಗಿ ಬರುವಂತೆ ಧರಿಸಬೇಕು. ರೋವರ್ ಸಖರು ರೋವರ್ ಸ್ಕೌಟ್ ನಾಯಕರಿಗೆ ಸಹಾಯ ಮಾಡುವರು.

**(iii) ದ್ವಿತೀಯಕ (Second):**



ರೋವರ್ ಸಖನು ತನ್ನ ಕರ್ತವ್ಯಗಳಲ್ಲಿ ಸಹಾಯ ಮಾಡಲು ದ್ವಿತೀಯಕನನ್ನು ನಿಯೋಜಿಸುವನು. ದ್ವಿತೀಯಕನು ರೋವರ್‌ನಂತೆಯೇ ಸಮವಸ್ತ್ರವನ್ನು ಧರಿಸುವುದರ ಜೊತೆಗೆ 6 ಸೆಂ.ಮೀ. ಉದ್ದ 1.5 ಸೆಂ.ಮೀ. ಅಗಲದ ಹತ್ತಿ ಅಥವಾ ಉಣ್ಣೆಯ ಒಂದು ಕೆಂಪು ಪಟ್ಟಿಯನ್ನು ಎಡಜೇಬಿನ ಮೇಲಿರುವ ಸದಸ್ಯತ್ವದ ಪದಕದ ಬಲಬದಿಗೆ ನೇರವಾಗಿ ಬರುವಂತೆ ಧರಿಸಬೇಕು.

**b. ತಂಡದ ಪರಿಷತ್ತು :**

(i) ಸನ್ನದು ಪಡೆದ ರೋವರ್ ಸ್ಕೌಟ್ ನಾಯಕರು, ಸಹಾಯಕ ರೋವರ್ ಸ್ಕೌಟ್ ನಾಯಕರು, ರೋವರ್ ಸಖರುಗಳು ಹಾಗೂ ಚುನಾಯಿತ ರೋವರ್‌ಗಳು ಸೇರಿ ತಂಡದ ಪರಿಷತ್ತಾಗಿರುತ್ತದೆ. ರೋವರ್ ಸಖರ ಪೈಕಿ ಒಬ್ಬರು ತಂಡ ಪರಿಷತ್ತಿನ ಅಧ್ಯಕ್ಷರಾಗಿರುತ್ತಾರೆ. ಸದಸ್ಯರ ಪೈಕಿ ಒಬ್ಬರು ಕಾರ್ಯದರ್ಶಿಗಳಾಗಿ ಕೆಲಸ ಮಾಡುತ್ತಾರೆ.

(ii) ರೋವರ್ ತಂಡಕ್ಕೆ ಸಂಬಂಧಿಸಿದ ಕಾರ್ಯಕ್ರಮ ಯೋಜನೆ, ಶಿಸ್ತು, ಆಡಳಿತ ಹಾಗೂ ಆರ್ಥಿಕ ಜವಾಬ್ದಾರಿಯು ತಂಡದ ಪರಿಷತ್ತಿಗೆ ಸೇರಿದ್ದು.

**ಸೂಚನೆ:** ರೋವರ್ ತಂಡದ ಗಾತ್ರವು ಸಂಪೂರ್ಣವಾಗದಿದ್ದಲ್ಲಿ ತಂಡದ ಎಲ್ಲಾ ಸದಸ್ಯರು ತಂಡ ಪರಿಷತ್ತಿನ ಕಾರ್ಯ ನಿರ್ವಹಿಸಬಹುದು. ಅಂತಹ ಸಂದರ್ಭದಲ್ಲಿ ರೋವರ್ ಉಮೇದುವಾರ ಮತ್ತು ಇತರ ನಿರ್ದಿಷ್ಟ ರೋವರ್‌ಗಳ ಬಗ್ಗೆ ವ್ಯವಹರಿಸುವಾಗ ಅಂತಹವರನ್ನು ಬಿಟ್ಟು ಉಳಿದವರು ತಂಡ ಪರಿಷತ್ತಿನ ಕೆಲಸ ನಿರ್ವಹಿಸುತ್ತಾರೆ.

**7. ರೋವರ್**

ರೋವರ್ ಪ್ರಗತಿಯಲ್ಲಿ ಮೂರು ಹಂತಗಳಿರುತ್ತವೆ. ಯಾವುವೆಂದರೆ–

(i) ರೋವರ್ ಉಮೇದುವಾರ (b) ರೋವರ್

(c) ಸೇವಾ ನಿರತ ರೋವರ್

**8. ರೋವರ್ ಉಮೇದುವಾರ**

ರೋವರ್ ಉಮೇದುವಾರನಾಗಿ ಸೇರ್ಪಡೆಯಾದವನು:

ಅ) 15 ವರ್ಷ ವಯಸ್ಸಾಗಿರಬೇಕು.

ಆ) ಪ್ರವೇಶ್ ಪರೀಕ್ಷೆಗಾಗಿ 3 ತಿಂಗಳ ಕಾಲ ಶ್ರಮಿಸಬೇಕು. ಪ್ರವೇಶ ಪದಕದ ಪರೀಕ್ಷೆಯಲ್ಲಿ ಉತ್ತೀರ್ಣನಾದ ಬಳಿಕ ರೋವರ್ ಅಥವಾ ಸಮುದ್ರ ರೋವರ್ ಅಥವಾ ವಾಯು ರೋವರ್ ಸಮವಸ್ತ್ರವನ್ನು (ಆಯಾ ತಂಡಕ್ಕೆ ತಕ್ಕಂತೆ) ಧರಿಸಬಹುದು.

**9. ಪ್ರವೇಶ್ ಪದಕದ ಪರೀಕ್ಷಾಂಶಗಳು**



1. ಬಾಲಕರಿಗಾಗಿ ಸ್ಕೌಟಿಂಗ್ ಮತ್ತು ಜಾಮೀಂದಾರರು ಹೇಳುವ ಇತರ ರೋವರಿಂಗ್ ಪುಸ್ತಕಗಳಲ್ಲಿ ಅಡಕವಾಗಿರುವ ವಿಷಯಗಳನ್ನು ಓದಿ ಅರ್ಥಮಾಡಿಕೊಳ್ಳಬೇಕು ಮತ್ತು ಒಪ್ಪಿಕೊಳ್ಳಬೇಕು.

2ಅ) ಈ ಹಿಂದೆ ಸ್ಕೌಟ್ ಆಗದೇ ಇದ್ದು, ಈಗ ಹೊಸದಾಗಿ ರೋವರ್ ಆಗಿ, ತಂಡವನ್ನು ಸೇರ ಬಯಸುವವನು, ಸ್ಕೌಟ್ ವಿಭಾಗದ ಪ್ರವೇಶ ಪರೀಕ್ಷೆಗಳಲ್ಲಿ ಅರ್ಹತೆ ಪಡೆಯಬೇಕು.

ಆ) ದೀಕ್ಷೆ ಪಡೆಯುವ ಮುಂಚೆ ರೋವರ್ ಉಮೇದುವಾರನಾಗಿ 3 ತಿಂಗಳ ಕಾಲ ಶ್ರಮಿಸಬೇಕು ಮತ್ತು ಆ ಬಳಿಕ ತಂಡದ ಪರಿಷತ್ತು ನಿಗದಿಪಡಿಸುವ ಉಮೇದುವಾರಿಕೆ ಅವಧಿಯನ್ನು ಪೂರ್ತಿಮಾಡ ಬೇಕು.

3. ಪ್ರತಿಜ್ಞೆ ಮತ್ತು ನಿಯಮಗಳನ್ನು ವಿವರಿಸಲು ಶಕ್ತನಿರಬೇಕು.

**ಸ್ಕೌಟ್ ವಿಭಾಗದ ಪ್ರವೇಶ ಪದಕದ ಪರೀಕ್ಷಾಂಶಗಳು**

1. ಸ್ಕೌಟಿಂಗ್‌ನ ಆರಂಭದ ಸಂಕ್ಷಿಪ್ತ ಮಾಹಿತಿ ಮತ್ತು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್‌ನ ನಿರೂಪಣೆ, ಉದ್ದೇಶ, ತತ್ವಗಳು ಮತ್ತು ವಿಧಾನಗಳನ್ನು ತಿಳಿದಿರಬೇಕು.

2. ಸ್ಕೌಟ್ ಪ್ರತಿಜ್ಞೆ ಮತ್ತು ನಿಯಮ.

3. ಸ್ಕೌಟ್ ಧ್ಯೇಯ, ಚಿಹ್ನೆ, ವಂದನೆ ಮತ್ತು ಎಡಗೈ ಹಸ್ತಲಾಘವ. ಇವುಗಳ ಬಗ್ಗೆ ತಿಳುವಳಿಕೆ ಇರಬೇಕು, ಕಾಣಿಸಬೇಕು.

4. ಒಂದು ತಿಂಗಳು ಮನೆಯಲ್ಲಿ ಮಾಡಿದ ದಿನಕ್ಕೊಂದು ಒಳ್ಳೆಯ ಕೆಲಸದ ಬಗ್ಗೆ ದಿನಚರಿ ಬರೆಯಬೇಕು.

5. ಸ್ಕೌಟ್ ಸಮವಸ್ತ್ರದ ಭಾಗಗಳ ಪರಿಚಯ ಮತ್ತು ಕ್ರಮಬದ್ಧವಾಗಿ ಹೇಗೆ ಧರಿಸುವುದು ಎಂಬುದನ್ನು ತಿಳಿದಿರಬೇಕು.

6. ರಾಷ್ಟ್ರೀಯ ಧ್ವಜ, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಧ್ವಜ, ವಿಶ್ವ ಸ್ಕೌಟ್ ಧ್ವಜದ ವಿವರ ಮತ್ತು ಅವುಗಳ ಮಹತ್ವವನ್ನು ತಿಳಿದಿರಬೇಕು. ಧ್ವಜಸ್ತಂಭದ ಮರ್ಯಾದೆ, ಸಂಪ್ರದಾಯ, ನಡೆವಳಿಕೆಗಳನ್ನು ತಿಳಿದಿರಬೇಕು.

7. ರಾಷ್ಟ್ರಗೀತೆ, ಸ್ಕೌಟ್ ಪ್ರಾರ್ಥನೆ ಮತ್ತು ಧ್ವಜಗೀತೆಯನ್ನು ಸರಿಯಾಗಿ ಹಾಡಬೇಕು. ಅವುಗಳನ್ನು ರಚಿಸಿದವರು ಮತ್ತು ಆ ಗೀತೆಗಳ ಅರ್ಥ, ಹಾಡುವ ಅವಧಿ ತಿಳಿದಿರಬೇಕು.

8. ಕನಿಷ್ಠ ನಾಲ್ಕು ದಳಸಭೆಗಳಲ್ಲಿ ಭಾಗವಹಿಸಬೇಕು.

## ಸಮುದ್ರ ರೋವರ್

ಪ್ರವೇಶ ಪರೀಕ್ಷಾಂಶಗಳ ಜೊತೆಗೆ ಸಮುದ್ರ ರೋವರ್ ಆಗಬಯಸುವ ಸಮುದ್ರ ರೋವರನು:

1. ನೀರಿನಲ್ಲಿ ಅನುಸರಿಸಬೇಕಾದ ಮುನ್ನೆಚ್ಚರಿಕೆ ನಿಯಮಗಳ ಬಗ್ಗೆ ತಿಳುವಳಿಕೆ ಹೊಂದಿರಬೇಕು.

2. ದೋಣಿಯಲ್ಲಿ ಮಾಡಬಹುದಾದ ಮತ್ತು ಮಾಡಬಾರದ, ಅಂಶಗಳ ಬಗ್ಗೆ ಅರಿತಿರಬೇಕು.

3. ದೋಣಿ, ಹರಿಗೋಲು, ನಾವೆ, ಹುಟ್ಟುಗೋಲು ಮತ್ತು ಲಂಗರುಗಳ ಬಗ್ಗೆ ಸಾಮಾನ್ಯ ಜ್ಞಾನ ಹೊಂದಿರಬೇಕು.

4. ಸೆಮಪೋರ್ ವಿಧಾನದ ಸಂಕೇತಗಳನ್ನು ಕಲಿಯಬೇಕು.

5. ತಮ್ಮ ಕ್ಷೇತ್ರದಲ್ಲಿ ಕಾಣಬರುವ ನಾವಿಕರ ಮಾರ್ಗದರ್ಶನ ಹಾಗೂ ಮೂರು ನಕ್ಷತ್ರ ಸಮೂಹಗಳ ಬಗ್ಗೆ ತಿಳಿದಿರಬೇಕು.

**ಗ್ರಾಮೀಣ ರೋವರ್**

1. ಸ್ಕೌಟ್ ಸಂಸ್ಥೆಯ ಬಗ್ಗೆ ಸಾಮಾನ್ಯ ತಿಳುವಳಿಕೆ ಇರಬೇಕು. ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್‌ನ ನಿರೂಪಣೆ, ಉದ್ದೇಶ, ತತ್ವಗಳು ಮತ್ತು ವಿಧಾನಗಳನ್ನು ತಿಳಿದಿರಬೇಕು.

2. ಬಾಲಕರಿಗಾಗಿ ಸ್ಕೌಟಿಂಗ್ ಮತ್ತು ಜಾಮೀನುದಾರರು ಹೇಳುವ ಇತರ ರೋವರಿಂಗ್ ಪುಸ್ತಕಗಳಲ್ಲಿ ಅಡಕವಾಗಿರುವ ವಿಷಯಗಳನ್ನು ಅರ್ಥ ಮಾಡಿಕೊಳ್ಳಬೇಕು, ಒಪ್ಪಿಕೊಳ್ಳಬೇಕು.

3. ರೋವರಿಂಗ್ ತತ್ತ್ವಗಳು ಮತ್ತು ಕಾರ್ಯಕ್ರಮಗಳನ್ನು ಅರ್ಥಮಾಡಿಕೊಂಡು ಅವುಗಳನ್ನು ಜೀವನದಲ್ಲಿ ಅನುಷ್ಠಾನಕ್ಕೆ ತರಲು ತಯಾರಿರಬೇಕು. ರೋವರ್‌ಗಳಿಗೆ ಅನ್ವಯಿಸುವಂತೆ ಸ್ಕೌಟ್ ನಿಯಮವನ್ನು ಅರ್ಥಮಾಡಿ ಕೊಳ್ಳಬೇಕು. ಸ್ಕೌಟ್ ಪ್ರತಿಜ್ಞೆಯಂತೆ ನಡೆದುಕೊಳ್ಳಬೇಕು.

4. ಸ್ಕೌಟ್ ಧ್ಯೇಯ, ಚಿಹ್ನೆ, ವಂದನೆ ಮತ್ತು ಎಡಗೈಹಸ್ತಲಾಘವ ಈ ಅಂಶಗಳ ಬಗ್ಗೆ ತಿಳಿದಿರಬೇಕು ಮತ್ತು ಮಾಡಿ ತೋರಿಸಬೇಕು.

5. ಒಂದು ತಿಂಗಳು ಮನೆಯಲ್ಲಿ ಮಾಡಿದ ದಿನಕ್ಕೊಂದು ಒಳ್ಳೆಯ ಕೆಲಸದ ಬಗ್ಗೆ ದಿನಚರಿ ಬರೆಯುವುದು.

6ಅ. ರಾಷ್ಟ್ರೀಯ ಧ್ವಜ, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಧ್ವಜ, ವಿಶ್ವ ಸ್ಕೌಟ್ ಧ್ವಜದ ವಿವರ ಮತ್ತು ಅವುಗಳ ಮಹತ್ವವನ್ನು ತಿಳಿದಿರಬೇಕು. ಧ್ವಜಸಂಬಂಧ ಮರ್ಯಾದೆ, ಸಂಪ್ರದಾಯ, ನಡವಳಿಕೆಗಳನ್ನು ತಿಳಿದಿರಬೇಕು.

ಆ. ರಾಷ್ಟ್ರಗೀತೆ, ಸ್ಕೌಟ್ ಪ್ರಾರ್ಥನೆ ಮತ್ತು ಧ್ವಜಗೀತೆಯನ್ನು ಸರಿಯಾಗಿ ಹಾಡಬೇಕು. ಅವುಗಳನ್ನು ರಚಿಸಿದವರು ಮತ್ತು ಆ ಗೀತೆಗಳ ಅರ್ಥ, ಹಾಡುವ ಅವಧಿ ತಿಳಿದಿರಬೇಕು.

ಇ. ಕನಿಷ್ಠ 4 ದಳ ಸಭೆಗಳಲ್ಲಿ ಭಾಗವಹಿಸಬೇಕು.

7. ಗ್ರಾಮೀಣ ರೋವರ್ ಸಮವಸ್ತ್ರದ ಭಾಗಗಳ ಬಗ್ಗೆ ಅರಿವಿರಬೇಕು.

8. ತಂಡ ಪರಿಷತ್ತು ನಿಗದಿಪಡಿಸುವ ಉಮೇದುವಾರಿಕೆ ಅವಧಿಯನ್ನು ಪೂರ್ತಿ ಮಾಡಬೇಕು.

**ಸೂಚನೆ:**

1. ರೋವರ್ ಉಮೇದುವಾರನು ಪರೀಕ್ಷಾಂಶಗಳನ್ನು ರೋವರ್ ಸ್ಕೌಟ್ ನಾಯಕರಿಗೆ ತೃಪ್ತಿಕರ ರೀತಿಯಲ್ಲಿ ಪೂರ್ಣಗೊಳಿಸಬೇಕು. ಅವರಿಂದ ಪ್ರತಿಜ್ಞೆ ಸ್ವೀಕರಿಸಿ ದೀಕ್ಷೆ ಪಡೆದ ನಂತರ ರೋವರ್ ಆಗುತ್ತಾನೆ. ಅನಂತರ ಸದಸ್ಯತ್ವ ಪದಕ ಧರಿಸಲು ಅರ್ಹನಾಗುತ್ತಾನೆ.

2. ಸದಸ್ಯತ್ವದ ಪದಕದಲ್ಲಿ ಕೆಂಪು ಒಡಲಿನ ಮೇಲೆ ಹಳದಿ ಬಣ್ಣದ ಸ್ಕೌಟ್ ಮತ್ತು ಗೈಡ್ ಸಂಸ್ಥೆಯ ಹಳದಿ ಬಣ್ಣದ ಲಾಂಛನವಿರುತ್ತದೆ. ಈ ಪದಕವನ್ನು ಎಡಜೇಬಿನ ಮಧ್ಯದಲ್ಲಿ ಅಥವಾ ಜರ್ಸಿಯ ಮೇಲೆ ಅದೇ ಸ್ಥಳದಲ್ಲಿ ಧರಿಸಬಹುದಾಗಿದೆ.

3. ರೋವರ್ ಸ್ಕೌಟ್ ನಾಯಕರ ಶಿಫಾರಸ್ಸಿನ ಮೇರೆಗೆ ಸ್ಥಳೀಯ ಸಂಸ್ಥೆ ಅಥವಾ ಜಿಲ್ಲಾ ಸಂಸ್ಥೆಯವರು ಇದನ್ನು ನೀಡುವರು.

4. ರೋವರ್ ಪ್ರತಿಜ್ಞೆ ಮತ್ತು ನಿಯಮ ಸ್ಕೌಟುಗಳಿಗಿರುವಂತೆಯೇ ಇರುತ್ತದೆ.

## 10. ರೋವರ್ ಸಮವಸ್ತ್ರ

ರೋವರ್ ಆದವನು ಈ ಕೆಳಗೆ ಸೂಚಿಸಿರುವ ವ್ಯತ್ಯಾಸಗಳೊಂದಿಗೆ ಸ್ಕೌಟ್‌ನಂತೆಯೇ ಸಮವಸ್ತ್ರ ಧರಿಸುವನು.

i) ಭುಜಪಟ್ಟಿಯ ಮೇಲೆ ಕೆಂಪು ಬಣ್ಣದ **'R'** ಅಕ್ಷರ ಇರುವ ಹಸಿರು ಭುಜಾಲಂಕಾರ.

ii) **ತೋಳುಪಟ್ಟಿಗಳು:**

ಕೆಂಪು, ಹಸಿರು ಮತ್ತು ನೀಲಿ ಬಣ್ಣದಲ್ಲಿರುತ್ತವೆ, ಕೆಂಪು ಮೇಲ್ಭಾಗದಲ್ಲೂ ನೀಲಿಯು ಕೆಳಭಾಗದಲ್ಲೂ ಇರುತ್ತದೆ. (ಪ್ರತಿ ಪಟ್ಟಿಯೂ 5 ಸೆಂ.ಮೀ. ಉದ್ದ, 1.5 ಸೆಂ.ಮೀ. ಅಗಲವಿದ್ದು



ಒಂದು ಪಟ್ಟಿಯಿಂದ ಮತ್ತೊಂದು ಪಟ್ಟಿಗೆ 2 ಸೆಂ.ಮೀ. ಅಂತರವಿರುತ್ತದೆ. ಎಡತೋಳಿನ ಭುಜಪದಕದ ಕೆಳಗೆ ಕೆಂಪು, ಹಸಿರು, ನೀಲಿ ಪಟ್ಟಿಗಳನ್ನು 2 ಸೆಂ.ಮೀ. ಅಂತರದಲ್ಲಿ ಹೊಲಿದುಕೊಳ್ಳಬೇಕು.

iii) **ಗಾರ್ಟರ್ ಟ್ಯಾಬ್ಸ್:** ಕೆಂಪು ಬಣ್ಣದ್ದಾಗಿರುತ್ತದೆ.

iv) ಸದಸ್ಯತ್ವದ ಪದಕವು ಕೆಂಪುಬಣ್ಣದ ಒಡಲಿನ ಮೇಲೆ, ಹಳದಿ ಬಣ್ಣದ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಲಾಂಛನವಿರುವ ಬಟ್ಟೆಯ ಪದಕವಾಗಿರುತ್ತದೆ. ಈ ಪದಕವನ್ನು ಎಡಜೇಬಿನ ಮಧ್ಯದಲ್ಲಿ ಧರಿಸಬೇಕು.

**ಸ್ಕೌಟ್‌ಗೆ ಸೂಚಿಸಿರುವ ಸಮವಸ್ತ್ರ:**

i) **ಷರ್ಟ್:** ಮೇಲೆ ಮಡಚಿದ ಪೂರ್ಣ ತೋಳು ಅಥವಾ ಅರ್ಧತೋಳಿನ ಎರಡು ಜೇಬುಗಳಿರುವ ಬೂದು ಬಣ್ಣದ ಷರ್ಟ್ (ಚಳಿ ವಾತಾವರಣದಲ್ಲಿ ಆಲಿವ್ ಹಸಿರಿನ ಜರ್ಸಿ ಧರಿಸಬಹುದು) ಚಳಿ ವಾತಾವರಣದಲ್ಲಿ ತೋಳನ್ನು ಬಿಡಿಸಬಹುದು.

ii) **ಷಾರ್ಟ್ಸ್ (ನಿಕ್ಕರ್) ಅಥವಾ ಟ್ರೌಸರ್ಸ್ (ಪ್ಯಾಂಟ್):** ಕಡುನೀಲಿ ಬಣ್ಣದ ಷಾರ್ಟ್ಸ್ ಅಥವಾ ಪ್ಯಾಂಟ್ ಧರಿಸಬೇಕು.

iii) **ಶಿರೋಧಾರಣೆ:** ರಾಷ್ಟ್ರೀಯ ಸಂಸ್ಥೆಯು ಸರಬರಾಜು ಮಾಡುವ ಅಧಿಕೃತ ಟೋಪಿ ಪದಕ ಹೊಂದಿದ ಕಡುನೀಲಿ ಬಣ್ಣದ ಬೆರ್ರೆ (ಟೋಪಿ) ಧರಿಸಬೇಕು. ಸಿಖ್ ಮತದವರು ಸಮಾರಂಭಗಳಲ್ಲಿ ಮಾತ್ರ ಕಡುನೀಲಿ ಬಣ್ಣದ ರುಮಾಲಿನ ಮೇಲೆ ಸಂಸ್ಥೆಯ ಟೋಪಿ ಪದಕವಿರುವಂತೆ ಧರಿಸಬಹುದು.

iv) **ಬೆಲ್ಟ್ (ಸೊಂಟಪಟ್ಟಿ):** ರಾಷ್ಟ್ರೀಯ ಸಂಸ್ಥೆಯವರು ಸರಬರಾಜು ಮಾಡುವ ಭಾರತ್ ಸ್ಕೌಟ್ ಮತ್ತು ಗೈಡ್ಸ್ ಸಂಸ್ಥೆಯ ಚಿಲಕಕಟ್ಟು ಇರುವ ಬೂದು ಬಣ್ಣದ ನೈಲೆಕ್ಸ್ ಸೊಂಟಪಟ್ಟಿಯಾಗಿರಬೇಕು.

v) **ಕಂಠವಸ್ತ್ರ (ಸ್ಕಾರ್ಫ್):** ಗುಂಪಿನ ಬಣ್ಣದ ಕಂಠವಸ್ತ್ರವಾಗಿರಬೇಕು. ಸ್ಥಳೀಯ ಅಥವಾ ಜಿಲ್ಲಾ ಸಂಸ್ಥೆಯವರಿಂದ ಅನುಮೋದಿತವಾಗಿರಬೇಕು. ಹಳದಿ, ಹಸಿರು, ನೇರಳೆ ಬಣ್ಣಗಳು ಆಗಿರಬಾರದು. ಸ್ಕಾರ್ಫ್ /ಕಂಠವಸ್ತ್ರವು ತ್ರಿಕೋಣಾಕಾರದಲ್ಲಿದ್ದು ಅದರ ಎರಡು ಭುಜಗಳು 70ರಿಂದ 90 ಸೆಂ.ಮೀ. ಉದ್ದವಾಗಿರಬೇಕು. ಸ್ಕಾರ್ಫ್‌ಗೆ ಉಪಯೋಗಿಸುವ ವೋಗಲ್

(ಉಂಗುರವು) ಗಿಲ್ ವೆಲ್ ವೋಗಲ್ ಆಗಿರಬಾರದು. ಇದು ಗುಂಪಿನ ನಮೂನೆಯೂ ಆಗಿರಬಹುದು.

vi) **ಭುಜಪದಕವು** 6ರಿಂದ 8 ಸೆಂ.ಮೀ. ಉದ್ದ ಹಾಗೂ 1.5 ಸೆಂ.ಮೀ. ಅಗಲವಿದ್ದು ಬಿಲ್ಲಿನಾಕಾರದಲ್ಲಿ ಸ್ವಲ್ಪ ಬಾಗಿರುತ್ತದೆ. ಬಿಳಿ ಬಣ್ಣದ ಮೇಲೆ ಕ್ರಮಸಂಖ್ಯೆ (ಇಚ್ಛಿಸಿದಲ್ಲಿ) ಗುಂಪಿನ / ಜಿಲ್ಲೆ / ರಾಜ್ಯದ ಹೆಸರು ಕೆಂಪುಬಣ್ಣದಲ್ಲಿರುತ್ತದೆ. ಇದನ್ನು ಎರಡೂ ಭುಜಗಳ ಮೇಲೆ ಹೊಲಿಗೆಯ ಕೆಳಗಡೆ ಧರಿಸಬೇಕು.

**ಸೂಚನೆ :** ಸಮುದ್ರ ಸ್ಕೌಟ್ ಅಥವಾ ವಾಯು ಸ್ಕೌಟ್ ಗುಂಪಿನ ಸದಸ್ಯರು ಭುಜಪದಕದ ಬದಲಿಗೆ ರಾಷ್ಟ್ರೀಯ ಸಂಸ್ಥೆಯು ಒದಗಿಸುವ ಸಮುದ್ರಸ್ಕೌಟ್ ಅಥವಾ ವಾಯುಸ್ಕೌಟ್ ಎಂಬ ಬಿಳಿಯ ಪಟ್ಟಿಯ ಮೇಲೆ ಕೆಂಪು ಬಣ್ಣದ ಪದಗಳಿರುವ ಪಟ್ಟಿಯನ್ನು ಎರಡೂ ಭುಜಪಟ್ಟಿಗಳ ಮೇಲೆ ಧರಿಸಬೇಕು.

**ಗಮನಿಸಿ:** ಚರಚಿಕಿತ್ಸಕ ಪ್ರವೀಣತಾ ಪದಕವು ಇದ್ದರೆ, ಆಗ ತೋಳುಪಟ್ಟಿಗಳನ್ನು ಚರಚಿಕಿತ್ಸಕ ಪದಕದ ಕೆಳಗೆ ಧರಿಸಬೇಕು.

vii) **ಸದಸ್ಯತ್ವದ ಪದಕ:** ಎಡಜೇಬಿನ ಮಧ್ಯ ಪಟ್ಟಿಯ ಮೇಲೆ ಈ ಪದಕವನ್ನು ಧರಿಸಬೇಕು. ಇದು ಹಸಿರು ಒಡಲಿನ ಮೇಲೆ ಹಳದಿ ಬಣ್ಣದ ಭಾರತ್ ಸ್ಕೌಟ್ ಮತ್ತು ಗೈಡ್ ಲಾಂಛನವಿರುವ ಪದಕವಾಗಿರುತ್ತದೆ.

viii) **ಕಾಲುಚೀಲ:** ಕರಿಯ ಬಣ್ಣದ ಕಾಲುಚೀಲವನ್ನು ಮೊಣಕಾಲಿನ ಕೆಳಭಾಗಕ್ಕೆ ಬರುವಂತೆ ಮಡಿಸಬೇಕು. ಹಸಿರು ಬಣ್ಣದ ಗಾರ್ಟರ್ ಟ್ಯಾಬ್‌ನಿಂದ ಬಿಗಿಸಬೇಕು. ಹೊರಭಾಗದಲ್ಲಿ ಗಾರ್ಟರ್ ಟ್ಯಾಬ್‌ನ 1.5 ಸೆಂ.ಮೀ. ಹಸಿರು ಚುಂಗು ಕಾಣುವಂತೆ ಇರಬೇಕು.

ix) **ವಿಶ್ವ ಸ್ಕೌಟ್ ಪದಕ:** ಸಮವಸ್ತ್ರದ ಷರ್ಟಿನ ಬಲಜೇಬಿನ ಮೇಲೆ ಕಡ್ಡಾಯವಾಗಿ ಧರಿಸಬೇಕು.

x) **ಪಾದರಕ್ಷೆ:** ಲೇಸ್ ಇರುವ ಕರಿಯ (ಚರ್ಮದ ಅಥವಾ ಕ್ಯಾನ್‌ವಾಸ್) ಷೂ ಧರಿಸಬೇಕು.

xi) **ಓವರ್ ಕೋಟ್, ಬ್ಲೇಸರ್ ಅಥವಾ ಜಾಕೆಟ್:** ಕಡುನೀಲಿ ಬಣ್ಣದ ಓವರ್ ಕೋಟ್, ಬ್ಲೇಸರ್ ಅಥವಾ ಸ್ವೆಟರ್‌ನ್ನು ಚಳಿಗಾಲದಲ್ಲಿ ಮಾತ್ರ ಧರಿಸಬಹುದು.

xii) **ಲೋಹದ ಪದಕ:** ಸಮವಸ್ತ್ರದಲ್ಲಿ ಇಲ್ಲದಿರುವಾಗ "ದಿ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್" ಲೋಹದ ಪದಕವನ್ನು ಧರಿಸಬಹುದು.

xiii) **ಲ್ಯಾನ್ ಯಾರ್ಡ್:** ಬೂದು ಬಣ್ಣದ ಲ್ಯಾನ್ ಯಾರ್ಡನ್ನು ಕಂಠದ ಸುತ್ತಲೂ ಧರಿಸಿ, ಶಿಳ್ಳೆಯನ್ನು ಎಡಜೇಬಿನಲ್ಲಿ ಸೇರಿಸಬೇಕು. 3 ಮೀ. ಉದ್ದದ, ನಿರ್ದಿಷ್ಟ ಮಾನದ ಗಂಟುಗಳನ್ನು ಹಾಕುವ ಹಗ್ಗವನ್ನು ಸಮವಸ್ತ್ರದ ಮೇಲೆ ಧರಿಸಬಹುದು.

**ಸಮುದ್ರ ಸ್ಕೌಟ್‌ಗಳಿಗೆ ಸಮವಸ್ತ್ರ:** ಸಮುದ್ರ ಸ್ಕೌಟ್‌ಗಳು ಸ್ಕೌಟ್‌ನಂತೆಯೇ ಸಮವಸ್ತ್ರ ಧರಿಸುವರು ಹಾಗೂ ಬಲಭಾಗದ ಜೇಬಿನ ಮೇಲ್ಭಾಗದಲ್ಲಿ ಸಮುದ್ರ ಸ್ಕೌಟ್ ಪದಕವನ್ನು ಧರಿಸುವರು.

**ವಾಯು ಸ್ಕೌಟ್‌ಗಳ ಸಮವಸ್ತ್ರ:** ವಾಯು ಸ್ಕೌಟ್‌ಗಳು ಸ್ಕೌಟ್‌ನಂತೆಯೇ ಸಮವಸ್ತ್ರ ಧರಿಸುವರು ಹಾಗೂ ಬಲಭಾಗದ ಜೇಬಿನ ಮೇಲ್ಭಾಗದಲ್ಲಿ ವಾಯುಸ್ಕೌಟ್ ಪದಕವನ್ನು ಧರಿಸುವರು.

**ಸಾಧಾರಣ ಉಡುಗೆ:**

a) **ವ್ಯಾವಹಾರಿಕ ಸಮವಸ್ತ್ರ:** ಹೊರಾಂಗಣ ಚಟುವಟಿಕೆ ಸಮವಸ್ತ್ರ (ಐಚ್ಛಿಕವಾಗಿ) ನೀಲಿ ಬಣ್ಣದ ಜೀನ್ಸ್, ಪ್ಯಾಂಟ್ ಅಥವಾ ನಿಕ್ಕರ್‌ನೊಂದಿಗೆ ಕಡುನೀಲಿ ಬಣ್ಣದ ಕಾಲರ್ ಇರುವ ಜೇಬಿನ ಮೇಲೆ ಮುದ್ರಿತಗೊಂಡ ಸ್ಕೌಟ್ ಲಾಂಛನವಿರುವ ಟೀ–ಷರ್ಟ್ ಹಾಗೂ ಗಾಢ ನೀಲಿಬಣ್ಣದ ಪಿ ಕ್ಯಾಪ್ – ಮಧ್ಯಭಾಗದಲ್ಲಿ ಮುದ್ರಿತಗೊಂಡ ಭಾರತ್ ಸ್ಕೌಟ್ ಮತ್ತು ಗೈಡ್ ಲಾಂಛನವಿರುವ ಟೋಪಿಯನ್ನು ಕರಿಯ ಕ್ರೀಡಾ ಷೂನೊಂದಿಗೆ ಹೊರಾಂಗಣ ಚಟುವಟಿಕೆಯ ವೇಳೆ ಧರಿಸಬಹುದು.

b) **ಸಮುದ್ರ ರೋವರ್ ಸಮವಸ್ತ್ರ:** ಸಮುದ್ರ ರೋವರ್, ಸಮವಸ್ತ್ರವನ್ನು ರೋವರ್‌ನಂತೆಯೇ ಧರಿಸುತ್ತಾನೆ. ಜೊತೆಗೆ ಸಮುದ್ರ ಸ್ಕೌಟ್ ಪದಕವನ್ನು ಬಲಜೇಬಿನ ಮೇಲ್ಭಾಗದಲ್ಲಿ ಧರಿಸುತ್ತಾನೆ.

c) **ವಾಯು ರೋವರ್ ಸಮವಸ್ತ್ರ:** ವಾಯು ರೋವರ್, ಸಮವಸ್ತ್ರವನ್ನು ರೋವರ್‌ನಂತೆಯೇ ಧರಿಸುತ್ತಾನೆ. ಜೊತೆಗೆ ವಾಯು ಸ್ಕೌಟ್ ಪದಕವನ್ನು ಬಲಜೇಬಿನ ಮೇಲ್ಭಾಗದಲ್ಲಿ ಧರಿಸುತ್ತಾನೆ.

d) **ಗ್ರಾಮೀಣ ರೋವರ್ ಸಮವಸ್ತ್ರ:** ಗ್ರಾಮೀಣ ರೋವರ್ ತಂಡದ ಪರಿಷತ್ತು ರೋವರ್ ಸಮವಸ್ತ್ರವನ್ನು ನಿಯಮ 10(a) ಪ್ರಕಾರ ನಿರ್ಧರಿಸಬಹುದು ಅಥವಾ ಕೆಳಕಂಡ ವ್ಯತ್ಯಾಸದೊಂದಿಗೆ ಅಳವಡಿಸಿಕೊಳ್ಳಬಹುದು.

i) ನೀಲಿ ಬಣ್ಣದ ಜೆರ್ಸ್ರಿ ಬದಲಿಗೆ ಕೇಸರಿ ರುಮಾಲನ್ನು ಧರಿಸಬಹುದು.

ii) ನಿಕ್ಕರ್ ಅಥವಾ ಪ್ಯಾಂಟಿನ ಬದಲಿಗೆ ಸ್ಥಳೀಯರ ರೀತಿಯಲ್ಲಿ ಬಿಳಿ ಬಣ್ಣದ ಧೋತಿಯನ್ನು ಧರಿಸಬಹುದು.

iii) ಧೋತಿಯನ್ನು ಧರಿಸುವುದಾದರೆ ಬಿಳಿಯ ಬಣ್ಣದ ಸ್ಕೌಟ್ ಮಾದರಿಯ ಷರ್ಟನ್ನು ಧರಿಸಬೇಕು.

iv) ಸ್ಥಳೀಯ ನಮೂನೆಯ ಚಪ್ಪಲಿ ಅಥವಾ ಷೂಸ್

v) ತಂಡದ ಕಂಠವಸ್ತ್ರ

vi) ಕೇಸರಿ ಬಣ್ಣದ ಸೊಂಟಪಟ್ಟಿಯನ್ನು (ಕಮ್ಮರ್ ಬಂದ್) ಷರ್ಟಿನ ಮೇಲೆ ಧರಿಸಬೇಕು.

## 11. ರೋವರ್‌ಗಳ ಪ್ರಗತಿಪರ ಯೋಜನೆ

### ಸೂಚನೆ

i) ಬಾಲಕನು 15 ವರ್ಷ ವಯಸ್ಸಾದ ಬಳಿಕ ರೋವರ್ ಉಮೇದುವಾರನನ್ನಾಗಿ ಸೇರಿಸಿಕೊಳ್ಳಬಹುದು.

ii) ರೋವರ್ ಉಮೇದುದಾರನಿಗೆ ರೋವರ್ ಆಗಿ ದೀಕ್ಷೆ ನೀಡಬಹುದು.

iii) ರೋವರ್ ಉಮೇದುವಾರನು ದೀಕ್ಷೆ ಪಡೆಯುವ ಮೊದಲು ಕನಿಷ್ಠ 3 ತಿಂಗಳು ಕೆಲಸ ಮಾಡಿ ಪ್ರವೇಶ್ ಪರೀಕ್ಷೆಗಳನ್ನು ಮುಗಿಸುತ್ತಾನೆ.

iv) ಪ್ರವೇಶ್ ರೋವರ್ ಕನಿಷ್ಠ ಆರು ತಿಂಗಳು ಕೆಲಸ ಮಾಡಿ ನಿಪುಣ್ ರೋವರ್ ಆಗಲು ಅರ್ಹನಾಗುತ್ತಾನೆ.

v) ನಿಪುಣ್ ರೋವರ್ ರಾಜ್ಯ ಪುರಸ್ಕಾರ್ ರೋವರ್ ಪದಕ ಪಡೆಯಲು ಕನಿಷ್ಠ 9 ತಿಂಗಳು ಸೇವೆ ಸಲ್ಲಿಸಬೇಕು.

vi) ರಾಜ್ಯ ಪುರಸ್ಕಾರ್ ಬಳಿಕ ರಾಷ್ಟ್ರಪತಿ ರೋವರ್ ಪ್ರಶಸ್ತಿ ಪಡೆಯಲು ಅರ್ಹನಾಗುವುದಕ್ಕೆ ಕನಿಷ್ಠ ಒಂದು ವರ್ಷ ಕೆಲಸ ಮಾಡಬೇಕು.

vii) ದಕ್ಷತಾ ಅಲಂಕಾರಿಕ ಹುರಿ (Efficiency cords) ರೋವರ್‌ಗಳ ದಕ್ಷತಾ ಹುರಿಗಳನ್ನು ವಿಶೇಷ ವಿನ್ಯಾಸದಲ್ಲಿ ಷಿಫಾನ್ ದಾರದಿಂದ ತಯಾರಿಸಿರುತ್ತಾರೆ. ಇದನ್ನು ರಾಷ್ಟ್ರೀಯ ಕಾರ್ಯಾಲಯದವರು ಒದಗಿಸುತ್ತಾರೆ. ಇದನ್ನು ಬಲಭುಜದಲ್ಲಿನ ಪಟ್ಟಿಯ ಕೆಳಗಿನಿಂದ ಬಲಜೇಬಿನ ಮೇಲಿನವರೆಗೆ ಸಮಾನಾಂತರ ಸಾಲುಗಳಲ್ಲಿ ಸಮತಲವಾಗಿ, ಬಿ.ಎಸ್.ಜಿ. ಪಟ್ಟಿಯ ಮೇಲೆ ಹೊಲೆದಿರಬೇಕು.

1) ನಿಪುಣ್ ಪದಕದ ಬಳಿಕ ರೋವರ್‌ನು ಹೆಚ್ಚು ಪ್ರವೀಣತಾ ಪದಕಗಳನ್ನು ಸಂಪಾದಿಸಬಹುದು.

2) ನಿಪುಣ್ ರೋವರನು ಮೊತ್ತದಲ್ಲಿ 7 ಪ್ರವೀಣತಾ ಪದಕಗಳನ್ನು ಸಂಪಾದಿಸಿದ್ದರೆ, ಜಿಲ್ಲಾ ಮುಖ್ಯ ಆಯುಕ್ತರು ಹಳದಿ ಬಣ್ಣದ ಅಲಂಕಾರಿಕ ಹುರಿಯನ್ನು ಕೊಡಬಹುದು.

3) ರಾಜ್ಯ ಪುರಸ್ಕಾರ್ ಸ್ಕೌಟ್, 12 ಪ್ರವೀಣತಾ ಪದಕಗಳನ್ನು ಮೊತ್ತದಲ್ಲಿ ಸಂಪಾದಿಸಿದಲ್ಲಿ ಜಿಲ್ಲಾ ಮುಖ್ಯ ಆಯುಕ್ತರು ನೇರಳೆ ಬಣ್ಣದ ಹುರಿಯನ್ನು ಕೊಡುತ್ತಾರೆ.

4) ಈ ಮುಂಚೆ ಸಂಪಾದಿಸದೆ ಇರುವ 5 ಪ್ರವೀಣತಾ ಪದಕಗಳನ್ನು ಸಂಪಾದಿಸಿದಲ್ಲಿ ಅಂತಹ ರಾಷ್ಟ್ರಪತಿ ಸ್ಕೌಟ್‌ಗೆ ತಿರಂಗ (ನೀಲಿ, ಹಸಿರು ಮತ್ತು ಕೆಂಪು) ಹುರಿಯನ್ನು ಕೊಡಲಾಗುತ್ತದೆ. ಇದನ್ನು ಜಿಲ್ಲಾ ಮುಖ್ಯ ಆಯುಕ್ತರು ವಿಧಿಯುಕ್ತವಾದ ಸಮಾರಂಭದಲ್ಲಿ ನೀಡುತ್ತಾರೆ.

## 12. ನಿಪುಣ್ ಪರೀಕ್ಷಾಂಶಗಳು

1. ಕುಟುಂಬದ ಸಂತೋಷಕ್ಕಾಗಿ ಕುಟುಂಬದ ಪರಿಶ್ರಮವನ್ನು ಕೈಗೆತ್ತಿಕೊಂಡು, ಕುಟುಂಬದಲ್ಲಿ ಹೆಚ್ಚು ಶ್ರಮವಹಿಸುತ್ತಿರುವ ಸದಸ್ಯರಿಗೆ ಸಹಾಯಕವಾಗುವಂತೆ ದುಡಿಮೆ ಯಲ್ಲಿ ತೊಡಗಿಸಿಕೊಳ್ಳಬೇಕು.



2. ರೋವರ್ ಸ್ಕೌಟ್ ನಾಯಕರ ಸಲಹೆ ಪಡೆದು ಲಾಕ್ಷಣಿಕ (ಟೆಪಿಕಲ್) ಹವ್ಯಾಸ/ಬಿಡುವಿನ ವೇಳೆಯ ಚಟುವಟಿಕೆಗಳಲ್ಲಿ ಉದಾ: ದರ್ಜಿ; ಉಡುಪುಗಳ ವಿನ್ಯಾಸ; ಮೋಂಬತ್ತಿ ತಯಾರಿಕೆ; ಅಡ್ಡತೆರೆ ಮುದ್ರಣ; ಲಲಿತಕಲೆ; ಕೇಶಾಲಂಕರಣ; ಫೋಟೋಗ್ರಫಿ: ರೂಪದರ್ಶಿ ಇತ್ಯಾದಿ ಆಸಕ್ತಿ ಬೆಳೆಸಿಕೊಂಡು, ತನ್ನನ್ನು ತಾನು ತೊಡಗಿಸಿಕೊಳ್ಳಬೇಕು. ಅದೊಂದು ಜೀವನೋಪಾಧಿ ಆಗುವಂತೆ ಇರಬೇಕು. ರೋವರನು ಅದರಲ್ಲಿ ಪ್ರಗತಿ ಹೊಂದುತ್ತಿರುವ ಬಗ್ಗೆ ಕಾಣಿಸಬೇಕು.

3. ನಿಮ್ಮ ತಂಡದ ಗುಂಪು ಚರ್ಚೆಗಳಲ್ಲಿ ಭಾಗವಹಿಸಿರಬೇಕು ಹಾಗೂ ಕನಿಷ್ಠ ಎರಡು ಸಭೆಗಳಲ್ಲಿ ಅಧ್ಯಕ್ಷತೆ ವಹಿಸಿರಬೇಕು.

4. ನಿಮ್ಮ ತಂಡದ ಕನಿಷ್ಠ ನಾಲ್ಕು ಸರ್ವಧರ್ಮ ಪ್ರಾರ್ಥನಾ ಸಭೆಗಳಲ್ಲಿ ಭಾಗವಹಿಸಿರಬೇಕು.

   ಮತ್ತು

   ಒಂದು ದಿನದ ಸೇವಾ ಶಿಬಿರದಲ್ಲಿ ಭಾಗವಹಿಸಿರಬೇಕು.

5. **ಅಗ್ರಗಾಮಿತ್ವ, ಶಿಬಿರ ವಾಸ, ಅಂದಾಜು ಮಾಡುವುದು, ದಿಕ್ಸೂಚಿ, ನಕ್ಷೆ ಬರೆಯುವುದು ಮತ್ತು ಪ್ರಥಮ ಚಿಕಿತ್ಸೆಗಳಲ್ಲಿ ಸ್ಕೌಟ್ ವಿಭಾಗದ ದ್ವಿತೀಯ ಸೋಪಾನ ಮಟ್ಟದವರೆಗೆ ತಿಳುವಳಿಕೆ ಪಡೆದುಕೊಂಡಿರಬೇಕು.**

ಈ ವಿಷಯಗಳು ತಂಡದ ಹೊರಾಂಗಣ ಕಾರ್ಯಕ್ರಮಗಳು ಮತ್ತು ಸೇವಾ ಕಾರ್ಯಾಚರಣೆಗಳಲ್ಲಿ ಉಪಯೋಗಕ್ಕೆ ಬರುವಂತಿರಬೇಕು.

---

## ಪ್ರಥಮ ಸೋಪಾನ

### ಅ) ಅಗ್ರಗಾಮಿತ್ವ (ಹಗ್ಗದ ಕೆಲಸ)

i. ಹಗ್ಗದ ತುದಿಗಳಿಗೆ ಹುರಿ ಸುತ್ತುವುದು.

ii. ಸಮಗಂಟು, ಮೂಲೆಗಂಟು, ಕೊಟ್ಟಿಗೆ ಗಂಟು, ಕುಣಿಕೆ ಗಂಟು, ಷೀಪ್‌ಷ್ಯಾಂಕ್, ಬೆಸ್ತರ ಗಂಟು, ಸುತ್ತೊಂದೆರಡು ಮಲುಕು ಗಂಟುಗಳನ್ನು ಹಾಕುವುದು ಮತ್ತು ಅವುಗಳ ಉಪಯೋಗಗಳನ್ನು ಕಾಣಿಸುವುದು.

iii. ಷೀರ್ ಲ್ಯಾಷಿಂಗ್ ವರ್ಾರ್ಕ್ 1 ಮತ್ತು ವರ್ಾರ್ಕ್ 2 ಹಾಕಲು ಬರಬೇಕು ಮತ್ತು ಕಾಣಿಸಬೇಕು.

iv. ಮನೆಗೆ ಉಪಯುಕ್ತವಾದ ಉಪಕರಣ ಮತ್ತು ಕರಕುಶಲ ವಸ್ತು ತಯಾರಿಸಬೇಕು.

**ಆ) ಪ್ರಥಮ ಚಿಕಿತ್ಸೆ**

i) ಸ್ವಂತ ಪ್ರಥಮ ಚಿಕಿತ್ಸೆ ಪೆಟ್ಟಿಗೆ.ಮಾಡಿಕೊಂಡು, ಅದರಲ್ಲಿರುವ ವಸ್ತುಗಳ ಬಗ್ಗೆ ತಿಳಿದಿರಬೇಕು.

ii) ಪ್ರಥಮ ಚಿಕಿತ್ಸೆ ಎಂದರೇನು? ತಿಳಿದಿರಬೇಕು ಮತ್ತು ಪ್ರಥಮ ಚಿಕಿತ್ಸೆಯ ಅಮೂಲ್ಯ ನಿಯಮಗಳನ್ನು ತಿಳಿದಿರಬೇಕು.

iii. ಸರಳವಾದ ತರಚಿದ, ಕೊಯ್ದು ಗಾಯಗಳು ಮತ್ತು ಮೂಗಿನಿಂದ ರಕ್ತಸ್ರಾವಕ್ಕೆ ಪ್ರಥಮ ಚಿಕಿತ್ಸೆ ಮಾಡುವುದು ಬರಬೇಕು.

## ದ್ವಿತೀಯ ಸೋಪಾನ

**ಅ) ಅಗ್ರಗಾಮಿತ್ವ**

i) ದಿಮ್ಮಿ ಗಂಟು, ರೋಲಿಂಗ್ ಹಿಚ್, ಮಾರ್ಲೈಲ್ಯಾನ್ ಸ್ಪೈಕ್ / ಲಿವರ್ ಹಿಚ್, ಎಂಟು ಆಕಾರದ ಗಂಟು.

ii) ಸ್ಕ್ವೇರ್ ಲ್ಯಾಷಿಂಗ್ ಮತ್ತು ಎಂಟು ಆಕಾರದ ಲ್ಯಾಷಿಂಗ್ ಇವುಗಳನ್ನು ಹಾಕುವ ವಿಧಾನ ಮತ್ತು ಉಪಯೋಗ.

iii) ಕೈಕೊಡಲಿ, ಮಚ್ಚು ಉಪಯೋಗವನ್ನು ಕಾಣಿಸಬೇಕು. ಸುರಕ್ಷತಾ ನಿಯಮಗಳು, ಹರಿತವಾಗಿಟ್ಟಿರುವ ರೀತಿ ತಿಳಿದಿರಬೇಕು.

iv) ಚಾಕು ಮತ್ತು ಬಾಕು ಉಪಯೋಗ, ಸುರಕ್ಷತಾ ಕ್ರಮ, ಹರಿತ ಮಾಡುವುದು ತಿಳಿದಿರಬೇಕು, ಕಾಣಿಸಬೇಕು ಮತ್ತು ಸ್ಕ್ರೂ ಡ್ರೈವರ್, ಪ್ಲಯರ್ಸ್ ಮತ್ತು ಸುತ್ತಿಗೆ ಉಪಯೋಗ ತಿಳಿದಿರಬೇಕು, ಕಾಣಿಸಬೇಕು.

**ಆ) ಅಂದಾಜು ಮಾಡುವುದು**

i) ಸುಧಾರಿತ ಕ್ರಮಗಳನ್ನನುಸರಿಸಿ 30 ಮೀಟರ್ ಕಡಿಮೆ ಇಲ್ಲದ, 100 ಮೀಟರ್‌ಗೆ ಹೆಚ್ಚಿಲ್ಲದ 2 ದೂರಗಳು, 2 ಅಗಲಗಳನ್ನು ಅಂದಾಜು ಮಾಡಬೇಕು.

ii) ನಿಮ್ಮ ಹೆಜ್ಜೆ ಮತ್ತು ಕ್ರಮಿಸುವಾಗಿನ ಗತಿಗಳನ್ನು (Pace, Stride) ತಿಳಿದಿದ್ದು, ಕ್ರಮಿಸಿದ ದೂರವನ್ನು ಅಂದಾಜು ಮಾಡಬೇಕು.

**ಇ) ಶಿಬಿರವಾಸ (ಹೊರಾಂಗಣ)**

i) ದಳದ ವಿಸ್ತೃತ ಬಯಲು ಆಟ (Wide Game)ದಲ್ಲಿ ಭಾಗವಹಿಸಬೇಕು.

ii) ದಳದ ಶಿಬಿರಾಗ್ನಿಯಲ್ಲಿ ಭಾಗವಹಿಸಬೇಕು. ಪಟಾಲಂನ ವಿಡಂಬನ ಕಾರ್ಯಕ್ರಮ (Skit) ನೀಡಬೇಕು. ಕನಿಷ್ಠ 2 ಜಾನಪದ / ದೇಶಭಕ್ತಿ ಗೀತೆಗಳು ತಿಳಿದಿರಬೇಕು.

iii) ರಸ್ತೆ ವಾಹನ ಸಂಚಾರ ಸುರಕ್ಷಾ ನಿಯಮಗಳನ್ನು ತಿಳಿದಿರಬೇಕು ಮತ್ತು ಆಚರಿಸಬೇಕು.

iv) ಸೈಕಲ್ ಸವಾರಿ ತಿಳಿದಿರಬೇಕು.

**ಈ) ದಿಕ್ಸೂಚಿ ಮತ್ತು ನಕ್ಷೆ**

i) ದಿಕ್ಸೂಚಿಯ 16 ದಿಕ್ಕುಗಳನ್ನು ತಿಳಿದಿರಬೇಕು.

ii) ಕನಿಷ್ಠ 2 ನಕ್ಷತ್ರ ರಾಶಿಗಳ ಸಹಾಯದಿಂದ ಉತ್ತರ ದಿಕ್ಕನ್ನು ಕಂಡುಕೊಳ್ಳಲು ಬರಬೇಕು.

iii) ದಿಕ್ಸೂಚಿಯ ಸಹಾಯದಿಂದ ನೀವು ಇರುವ ಸ್ಥಳದಿಂದ ಬೇರೆ ಬೇರೆ ವಸ್ತುಗಳ ಬೇರಿಂಗ್ ಹೇಳಲು ತಿಳಿದಿರಬೇಕು.

iv) ದಿಕ್ಸೂಚಿಯ ಬೇರಿಂಗ್ ಮತ್ತು ದೂರಗಳನ್ನು ಉಪಯೋಗಿಸಿಕೊಂಡು, ಗುರುತಿಸಿರುವ ದಾರಿಯಲ್ಲಿ ಜಾಡುಹಿಡಿಯಬೇಕು.

v) ಮಾಪನ (Scale) ದಿಕ್ಕು (Direction) ಸಾಂಪ್ರದಾಯಿಕ ಚಿಹ್ನೆ (Conventioner Signs) ಸಮಾನಾಂತರ ರೇಖೆಗಳು (Contours) ಮತ್ತು ಚೌಕಟ್ಟು ಉಲ್ಲೇಖ (Grid reference) ಈ ಹೆಸರುಗಳ ಅರ್ಥವನ್ನು ತಿಳಿದಿರಬೇಕು.

vi) ಪ್ರವಾಸೀ ನಕ್ಷೆಯನ್ನು ಉಪಯೋಗಿಸಲು ಬರಬೇಕು.

**ಉ) ಪ್ರಥಮ ಚಿಕಿತ್ಸೆ**

i) ಗಾಯಗಳ ಬಗ್ಗೆ ತಿಳಿದಿರಬೇಕು. ರಕ್ತಸ್ರಾವ, ಸುಟ್ಟ, ಬೆಂದ ಗಾಯಗಳು, ಉಳುಕು, ಕುಟುಕುಗಳು ಮತ್ತು ಕಡಿತಗಳು ಚಿಕಿತ್ಸೆ ತಿಳಿದಿರಬೇಕು.

ii) ರೋಲರ್ ಬ್ಯಾಂಡೇಜ್ ಉಪಯೋಗ ಕಾಣಿಸಬೇಕು.

iii) ತಲೆ, ಕೈ, ಮೊಣಕಾಲು, ಪಾದ, ಹದಡು (ankle) ಮತ್ತು ತೋಳು ಇವುಗಳ ಮೂಳೆ ಮುರಿತಕ್ಕೆ ಮುಮ್ಮಾಲೆಪಟ್ಟಿ ಕಟ್ಟುವುದು ತಿಳಿದಿರಬೇಕು ಮತ್ತು ಕಾಣಿಸಬೇಕು.

iv) ಡೋಲಿಯನ್ನು ಸುಧಾರಿತ ರೀತಿಯಲ್ಲಿ ಮಾಡಿಕೊಳ್ಳಲು ತಿಳಿದಿರಬೇಕು.

---

6. ಸುಮಾರು ಒಂದು ತಿಂಗಳ ಅವಧಿಗೆ ನಿಮ್ಮ ಮೊಹಲ್ಲಾದಲ್ಲಿ / ಹಳ್ಳಿಯಲ್ಲಿ ಮಕ್ಕಳಿಗೆ ಆಟವನ್ನು ಏರ್ಪಡಿಸಿ **ಅಥವಾ**

   ಸ್ಥಳೀಯರಿಗೆ ಆದ್ಯತೆ ನೀಡಿ ಸಂರಕ್ಷಣಾ ವಿಷಯದ ಬಗ್ಗೆ ಮಕ್ಕಳಿಗೆ ಸ್ಪರ್ಧೆಯನ್ನು ನಡೆಸಿ.

7. ಜನಸಂಖ್ಯಾ ಶಿಕ್ಷಣ / ಕುಟುಂಬ ಜೀವನ ಶಿಕ್ಷಣದ ಬಗ್ಗೆ ಚರ್ಚೆ ಅಥವಾ ಬೀದಿನಾಟಕದಲ್ಲಿ ಭಾಗವಹಿಸಬೇಕು.

8. ಈ ಕೆಳಗಿನವುಗಳಲ್ಲಿ ಯಾವುದಾದರೊಂದು ರೋವರ್ ಪ್ರವೀಣತಾ ಪದಕವನ್ನು ಗಳಿಸಿರಬೇಕು.

   i) ಸಾಕ್ಷರತೆ
   ii) ಜನಸಂಖ್ಯಾ ಶಿಕ್ಷಣ
   iii) ವಿಶ್ವ ಮೈತ್ರಿ
   iv) ನಾಗರಿಕ ರಕ್ಷಣೆ
   v) ಪಾಕೀಜು ಪ್ರವರ್ತಕ

9. ಯಾವುದೇ ಒಂದು ಹಿಂಡು ಅಥವಾ ಒಂದು ದಳ ಅಥವಾ ಒಂದು ಸ್ಥಳೀಯ/ ಜಿಲ್ಲಾ ಶಿಬಿರ ಕೇಂದ್ರದೊಡನೆ ಸಹಕರಿಸಿ 3 ತಿಂಗಳ ಅವಧಿಯ ಅವಶ್ಯಕತೆಯನ್ನು ಅನುಸರಿಸಿದ ಸೇವೆಯನ್ನು ಸಲ್ಲಿಸಿರಬೇಕು ಅಥವಾ ಯಾವುದೇ ಒಂದು ಸಂಸ್ಥೆ / ಗ್ರಾಮ / ಕೊಳಚೆ ಪ್ರದೇಶ / ಸ್ಥಳೀಯ ಪ್ರದೇಶದಲ್ಲಿ 3 ತಿಂಗಳ ಕಾಲ ಸೇವೆ ಸಲ್ಲಿಸಬೇಕು.

10. ಕೆಳಗಿನವುಗಳೊಂದರಲ್ಲಿ ಭಾಗವಹಿಸಿ:
    i) ಶಿಲಾರೋಹಣ ii) ಚಾರಣ
    iii) ರ್‍ಯಾಫ್ಟಿಂಗ್ iv) ಪ್ಯಾರಾಸೈಲಿಂಗ್
    v) ಪ್ಯಾರಾಜಂಪಿಂಗ್ **ಅಥವಾ**

    ನ್ಯಾಷನಲ್ ಅಡ್ವೆಂಚರ್ ಇನ್ಸ್‌ಟಿಟ್ಯೂಟ್, ಪಚಮಢಿ ಅಥವಾ ಇತರ ಮಾನ್ಯತೆ ಪಡೆದ ಸಂಸ್ಥೆಯ ಸಂಪೂರ್ಣ ಸಾಹಸಿಕ ಕಾರ್ಯಕ್ರಮದಲ್ಲಿ ಭಾಗವಹಿಸುವುದು.

11. ಬಿ.ಪಿ. ಅವರ 6 ವ್ಯಾಯಾಮಗಳು ಅಥವಾ ಸೂರ್ಯನಮಸ್ಕಾರ ಅಥವಾ ಏರೋಬಿಕ್ ವ್ಯಾಯಾಮಗಳನ್ನು ಅಭ್ಯಾಸ ಮಾಡಬೇಕು.

12. ಮಹಿಳೆಯರ ರಕ್ಷಣೆಯ ಬಗೆಗಿನ ನಿಯಮಗಳನ್ನು ತಿಳಿದಿರಬೇಕು.

13. ಮಹಿಳೆಯರು ಮತ್ತು ಹೆಣ್ಣುಮಕ್ಕಳಿಗೆ ಅತ್ಯಾಚಾರದ ವಿರುದ್ಧ ಆಂದೋಲನವನ್ನು ಏರ್ಪಡಿಸುವುದು.

14. ಶಾಲೆ/ಕಾಲೇಜು/ವಸತಿ ಪ್ರದೇಶದ ಆಸುಪಾಸಿನಲ್ಲಿರುವ ಕಾರ್ಖಾನೆಯೊಂದಕ್ಕೆ ಭೇಟಿ ನೀಡಬೇಕು. ವಿವಿಧ ವಸ್ತುಗಳ ತಯಾರಿಕಾ ವಿಧಾನಗಳ ಬಗ್ಗೆ ತಿಳಿದುಕೊಳ್ಳಬೇಕು ಮತ್ತು ಕಾರ್ಮಿಕ ಘನತೆಯ ಬಗ್ಗೆ ತಿಳಿದಿರಬೇಕು.

**ಸಮುದ್ರ ರೋವರ್‌ಗಳಿಗೆ:** ನಿಪುಣ್ ಪದಕ ಪರೀಕ್ಷಾಂಶಗಳ ಜೊತೆಗೆ ಸಮುದ್ರ ರೋವರ್ ಆದವನು:

1. ಐವತ್ತು ಮೀಟರ್ ಈಜಬೇಕು.

2. ದೋಣಿ ಎಳೆಯಲು ಅಥವಾ ನಡೆಸಲು ತಿಳಿದಿರಬೇಕು.

3. ಸೆಮಫೋರ್ ವಿಧಾನದಲ್ಲಿ ಸರಳವಾದ ಪದಗಳನ್ನು ಕಳುಹಿಸಲೂ ಮತ್ತು ಸ್ವೀಕರಿಸಲೂ ತಿಳಿದಿರಬೇಕು.

4. ನಿಮ್ಮ ಸ್ಥಳದಲ್ಲಿ ಕಾಣಬರುವ ಕನಿಷ್ಠ ಮೂರು ತಾರಾಮಂಡಲಗಳ ಬಗ್ಗೆ ತಿಳಿದಿರಬೇಕು.

5. ನೆರೆಹೊರೆಯ ರಾಷ್ಟ್ರಗಳ ರಾಷ್ಟ್ರಧ್ವಜಗಳ ಬಗ್ಗೆ ತಿಳಿದಿರಬೇಕು.

**ವಾಯುರೋವರ್:**

ನಿಪುಣ್ ಪದಕಗಳ ಪರೀಕ್ಷಾಂಶಗಳ ಜೊತೆಗೆ ವಾಯು ರೋವರ್ ಆದವನು:

1. ಸ್ಕೌಟಿಂಗ್ ಸಾಮಾನ್ಯ ಮಾಹಿತಿ ಶಿಬಿರದಲ್ಲಿ ಭಾಗವಹಿಸಿರಬೇಕು.
2. ಪ್ಯಾರಾ ಚೂಟ್ ಮತ್ತು ವಿಮಾನದಲ್ಲಿ ಉಚ್ಚಾಟನಾ ಆಸನಗಳನ್ನು ಬಳಸುವಿಕೆಯ ಬಗ್ಗೆ ತಿಳಿದಿರಬೇಕು.
3. ವಿಮಾನ ಮಾದರಿಯೊಂದರ ತಯಾರಿಕೆ ಮತ್ತು ನಿರ್ವಹಣೆಯಲ್ಲಿ ಕೆಲಸ ಮಾಡಬೇಕು.
4. ಅಪಘಾತಕ್ಕೊಳಪಟ್ಟ ವಿಮಾನದಲ್ಲಿ ಸಿಲುಕಿಕೊಂಡ ಚಾಲಕನನ್ನು ರಕ್ಷಿಸುವ ವಿಧಾನಗಳನ್ನು ತಿಳಿದಿರಬೇಕು.
5. ವಿಮಾನದ ಆಯಕಟ್ಟು ಭಾಗದಲ್ಲಿರುವ ಮಾಪಕಗಳ ಬಗ್ಗೆ ತಿಳಿದಿರಬೇಕು.

**ಗ್ರಾಮೀಣ ರೋವರ್:**

ರೋವರ್‌ಗಳಿಗೆ ನಿಗದಿಪಡಿಸಿರುವ ಎಲ್ಲಾ ನಿಯಮಗಳೂ ಗ್ರಾಮೀಣ ರೋವರ್‌ಗಳಿಗೆ ಅನ್ವಯವಾಗುತ್ತವೆ. ಗ್ರಾಮೀಣ ರೋವರ್‌ಗಳಿಗೆ ಕಷ್ಟವೆನಿಸುವ / ಸಂಬಂಧಪಡದ ಅಂಶಗಳನ್ನು DCC, SOC ಇವರುಗಳ ಶಿಫಾರಸ್ಸಿನ ಮೇಲೆ, SCC ಅವರ ಅನುಮತಿ ಪಡೆದು, ಸೂಕ್ತ ಚಟುವಟಿಕೆ/ ಯೋಜನೆಗಳನ್ನು ಕೈಗೊಳ್ಳಬಹುದು. ಪ್ರಾದೇಶಿಕ ಅನ್ವಯ ಚಟುವಟಿಕೆಗಳ ಬಗ್ಗೆ SCC ಅವರು ಅನುಮತಿ ನೀಡಿರುವ ಪತ್ರದ ನಕಲನ್ನು ಟೆಸ್ಟಿಂಗ್ ಕ್ಯಾಂಪ್‌ನಲ್ಲಿ ಸಾದರಪಡಿಸಬೇಕು.

**ಸೂಚನೆ:**

i) ಪರೀಕ್ಷಕನಾದ RSL ನಿಗೆ ತೃಪ್ತಿಯಾಗುವಂತೆ ಪರೀಕ್ಷಾಂಶಗಳನ್ನು ಮುಗಿಸಿದ ಬಳಿಕ ಸ್ಥಳೀಯ ಅಥವಾ ಜಿಲ್ಲಾ ಸಂಸ್ಥೆಯವರು ನಿಪುಣ್ ಪದಕವನ್ನು ನೀಡುತ್ತಾರೆ.

ii) ನಿಪುಣ್ ಪದಕವು ಒಂದು ಜೊತೆ ಹತ್ತಿ ಅಥವಾ ಉಣ್ಣೆಯ ಹಸಿರು ಬಣ್ಣದ ಭುಜಪಟ್ಟಿಯಾಗಿರುತ್ತದೆ. ಇದರ ಮೇಲೆ ಕೆಂಪು ಬಣ್ಣದಲ್ಲಿ ಇಂಗ್ಲೀಷಿನ **'R'** ಅಕ್ಷರವಿರುತ್ತದೆ. ಈ ಅಕ್ಷರದ ಹಿಂದೆ ಹಳದಿ ಬಣ್ಣದ ಒಂದು ರೇಖೆ ಇರುತ್ತದೆ.

iii) ಈ ಪದಕವನ್ನು ಭುಜಪಟ್ಟಿಗಳ ಮೇಲೆ ಧರಿಸಬೇಕು.

## 13. ರಾಜ್ಯ ಪುರಸ್ಕಾರ್ ಪರೀಕ್ಷಾಂಶಗಳು

1. ಚುನಾವಣಾ ಆಯೋಗದ ವೆಬ್‌ಸೈಟಿನಲ್ಲಿ ಮಾಹಿತಿ ಪಡೆದು ಕನಿಷ್ಠ ಇಬ್ಬರು ವ್ಯಕ್ತಿಗಳನ್ನು ಚುನಾವಣಾ ಪಟ್ಟಿಯಲ್ಲಿ ನೋಂದಾಯಿಸಿಕೊಳ್ಳಲು ಸಹಾಯ ಮಾಡುವುದು.



2.ಅ) ತೃತೀಯ ಸೋಪಾನ್‌ವರೆಗಿನ **ಪ್ರಥಮ ಚಿಕಿತ್ಸೆ, ಅಗ್ರಗಾಮಿತ್ವ, ನಕ್ಷೆ ಬರೆಯುವುದು** ಮತ್ತು **ಶಿಬಿರ ಕಲಾ ಕೌಶಲಗಳನ್ನು** ತಿಳಿದಿರಬೇಕು.

ಆ) ಹವ್ಯಾಸಗಳು, ಕರಕುಶಲ ಕಲೆಗಳು, ತಾಂತ್ರಿಕ ಕೌಶಲಗಳಲ್ಲಿ ಪ್ರಗತಿ ಹೊಂದಿರುವುದನ್ನು ಕಾಣಿಸಬೇಕು.

---

## ಸ್ಕೌಟ್ ವಿಭಾಗದ ತೃತೀಯ ಸೋಪಾನ ಪದಕದ ಅವಶ್ಯಕ ಪರೀಕ್ಷಾಂಶಗಳು

**i) ಪ್ರಥಮ ಚಿಕಿತ್ಸೆ:**

ಅ) ನೀರಿನಲ್ಲಿ ಮುಳುಗುವುದು, ವಿದ್ಯುದಾಘಾತ, ಸಾಮಾನ್ಯ ಆಘಾತ, ಮೋಟಾರು ಮೋಹನಗಳ ಅಪಘಾತ ಮತ್ತು ಬೆಂಕಿಯಲ್ಲಿ ಸಿಕ್ಕಿಬಿದ್ದಿರುವ ವ್ಯಕ್ತಿಗಳು ಇವೇ ಮುಂತಾದ ತುರ್ತು ಸಂದರ್ಭಗಳನ್ನು ಹೇಗೆ ನಿರ್ವಹಿಸಬೇಕು ತಿಳಿದಿರಬೇಕು.

ಆ) ಉಸಿರು ಕಟ್ಟಿರುವುದಕ್ಕೆ ಚಿಕಿತ್ಸೆ ಮಾಡಬೇಕು.

ಇ) ಕುತ್ತಿಗೆ ಕೆಳಗಿನ ಅಡ್ಡೆಲುಬು, ಮೇಲ್ತೋಳು, ಮುಂದೋಳು, ಟೊಂಕ ಮತ್ತು ಕೆಳಗಾಲು ಇವುಗಳ ಸರಳ ಮೂಳೆ ಮುರಿತಗಳಿಗೆ ಚಿಕಿತ್ಸೆ ಮಾಡಬೇಕು.

ಈ) CPR ಪುನಶ್ವಾಸ ಪದ್ಧತಿ ಕಾಣಿಸಬೇಕು.

ಉ) ಜ್ಞಾನ ತಪ್ಪಿದ ರೋಗಿಯನ್ನು ಚೇತರಿಕೆಯ ಸ್ಥಿತಿಯಲ್ಲಿ ಮಲಗಿಸಬೇಕು.

ಊ) ಒಬ್ಬರು ಮಾತ್ರ ಮತ್ತು ಇಬ್ಬ ಇರುವಾಗ ರೋಗಿಯನ್ನು ಒಯ್ಯುವ ವಿಧಾನವನ್ನು ತಿಳಿದಿರಬೇಕು.

ii) **ಅಗ್ರಗಾಮಿತ್ವ**

ಅ) ಅಗ್ನಿಶಾಮಕನ ಕುರ್ಚಿಗಂಟು, ಮ್ಯಾನ್‌ಹಾರ್ನೆಸ್ ಗಂಟು, ಕುಣಿಕೆ ಒಳಗಿನ ಕುಣಿಕೆ ಗಂಟು, ಜೀರುಗಂಟು ಹಾಕಬೇಕು ಮತ್ತು ತಿಳಿದಿರಬೇಕು.

ಆ) ಕರ್ಣಕಟ್ಟು ಹಾಕಲು ಬರಬೇಕು, ಕಾಣಿಸಬೇಕು.

ಇ) ಪ್ರಥಮ ಸೋಪಾನದಲ್ಲಿ ಉಪಯೋಗಿಸಿದ ವಿಧಾನ ಬಿಟ್ಟು, ಬೇರೆ ವಿಧಾನದಲ್ಲಿ ಹುರಿಸುತ್ತಲು ಬರಬೇಕು.

ಈ) ನಿಮ್ಮ ಪಟಾಲಂನೊಡಗೂಡಿ, 3 ದಂಡಗಳನ್ನು ಸೇರಿಸಿ ಧ್ವಜ ದಂಡ ಕಟ್ಟಬೇಕು ಮತ್ತು ಧ್ವಜಾರೋಹಣವನ್ನು ಮಾಡಿ ತೋರಿಸಬೇಕು.

ಉ) ನಿಮಗೊಬ್ಬರಿಗೆ ಒಂದು ತಾತ್ಕಾಲಿಕ ಒಪ್ಪಾರ್ ಹಾಕಿಕೊಳ್ಳಬೇಕು.

ಊ) ಕಣ್ಣು/ಹಿಮ್ಮುಖ ಸಣ್ಣ ಹೆಣಿಗೆಗಳಲ್ಲಿ ಒಂದು ವಿಧಾನವನ್ನು ತಿಳಿದಿರಬೇಕು.

iii) **ನಕ್ಷೆ ಬರೆಯುವುದು**

ಅ) GPS ನಕ್ಷೆಯನ್ನು ಸಂಪಾದಿಸಿ, ನಿರ್ದೇಶಿತ ಮಾರ್ಗವನ್ನು ಕ್ರಮಿಸಲು ತಿಳಿದಿರಬೇಕು. **ಅಥವಾ** ತ್ರಿಕೋನ ಪದ್ಧತಿಯಲ್ಲಿ ದಿಕ್ಸೂಚಿ/ಸಮತಲ ಮೇಜು ಪದ್ಧತಿ ಉಪಯೋಗಿಸಿ ಪ್ರಾದೇಶಿಕ ನಕ್ಷೆ ತಯಾರಿಸಿ.

ಆ) ಕ್ರಮಿಸಿದ ದಾರಿ ಅಥವಾ ಗಿಲ್‌ವೆಲ್ ಸ್ಕೆಚ್ ಪದ್ಧತಿಯಲ್ಲಿ 4 ಕಿ.ಮೀ. ದೂರ ನಡೆದ ಮಾರ್ಗದ ನಕ್ಷೆಯನ್ನು ಚಿತ್ರಿಸಿ.

---

3. ವ್ಯವಹಾರ ವಿಶ್ಲೇಷಣೆಯ ಬಗ್ಗೆ ಯಾವುದಾದರೂ ಪುಸ್ತಕವನ್ನು ಓದಿ, 3 ಮನೋಸ್ಥಿತಿಗಳ ಬಗ್ಗೆ ಅಥವಾ 3 ವಿಧದ ವಿಶ್ಲೇಷಣೆಗಳನ್ನು ವಿವರಿಸಬೇಕು.

4. ಸ್ಕೌಟ್ ವಿಭಾಗದ **'ಚರ ಚಿಕಿತ್ಸಕ'** ಪ್ರವೀಣತಾ ಪದಕಕ್ಕೆ ಅರ್ಹತೆ ಪಡೆಯಬೇಕು. CPR ಪುನಶ್ವಾಸ ಪದ್ಧತಿಯ ಬಗ್ಗೆ ತಿಳಿದಿರಬೇಕು.

5. ಧರ್ಮ ಸಹಿಷ್ಣುತೆ ಬಗ್ಗೆ ಮಾತನಾಡಬೇಕು ಅಥವಾ ತಮ್ಮದಲ್ಲದ ಇತರ ಧಾರ್ಮಿಕ ಕಾರ್ಯಕ್ರಮದಲ್ಲಿ ಭಾಗವಹಿಸಿದ ಬಗ್ಗೆ ವರದಿಯನ್ನು ರೋವರ್ ಸ್ಕೌಟ್ ನಾಯಕರಿಗೆ ಅಥವಾ ತಂಡ ಪರಿಷತ್ತಿಗೆ ಸಾದರಪಡಿಸಬೇಕು.

6. ಪ್ರಮುಖ ಸಾರ್ವಜನಿಕ ಕಟ್ಟಡ/ಸ್ಥಳ/ಸಂಸ್ಥೆ/ಉದ್ಯಾನ ಇವುಗಳ ಬಗ್ಗೆ ಕನಿಷ್ಟ ವಾರದಲ್ಲಿ 2 ಗಂಟೆಯಂತೆ ಕನಿಷ್ಠ ಮೂರು ತಿಂಗಳ ಕಾಲ ಸೇವೆ ಸಲ್ಲಿಸಬೇಕು.

7. ಅ) ಸಾರ್ವಜನಿಕ ಸ್ವತ್ತನ್ನು ಸಂರಕ್ಷಿಸುವ ಬಗ್ಗೆ ತಮ್ಮ ತಂಡದೊಂದಿಗೆ ಸಾರ್ವಜನಿಕ ಬೋಧನಾ ಶಿಬಿರದಲ್ಲಿ ಭಾಗವಹಿಸಬೇಕು.

   ಆ) ಅಂತಹ ಆಂಧೋಲನಾ ಶಿಬಿರದಲ್ಲಿ ತಂಡ ಮತ್ತು ಸ್ಥಳೀಕ ಸಮುದಾಯದೊಡನೆ ಸೇರಿ ಅಗ್ರಗಾಮಿತ್ವ ಯೋಜನೆಯೊಂದನ್ನು ನಿರ್ಮಿಸಬೇಕು.

8. ಭಾರತದ ಯಾವುದೇ ಪ್ರದೇಶದ ಸಂಸ್ಕೃತಿ ಮತ್ತು ಪರಂಪರೆ ಬಗ್ಗೆ ಆಧುನಿಕ ದೃಕ್‌ಶ್ರವಣ ಸಾಧನಗಳನ್ನು ಉಪಯೋಗಿಸಿ ಪ್ರದರ್ಶಿಸಬೇಕು.

9. ರೋವರ್‌ಗಳಲ್ಲಿ ಉಳಿತಾಯ ಮನೋಭಾವ ಮೂಡಿಸಲು, ಅವರದೇ ಬ್ಯಾಂಕ್‌ನ ಮೂಲಕ ಪ್ರಚೋದಿಸಬೇಕು ಮತ್ತು ಬ್ಯಾಂಕಿಂಗ್ ವ್ಯವಹಾರವನ್ನು ಕಲಿಯಲು ಪ್ರಚೋದಿಸಬೇಕು ಅಥವಾ ಸ್ಥಳೀಯ ಗ್ರಾಮ/ನಗರ/ ಮಹಾನಗರದಲ್ಲಿ ಒಂದು ಸ್ವಸಹಾಯ ಗುಂಪು ಉಳಿತಾಯ ಮಾಡಲು ಮಾರ್ಗದರ್ಶನ ಮಾಡಿ ಪ್ರಚೋದಿಸಬೇಕು.

10. ಅ) ಸಾಮಾಜಿಕ ಜಾಲತಾಣದಲ್ಲಿ **ಐಡಿ**ಯನ್ನು ಮಾಡಿಕೊಂಡು, ಭಾರತ್ ಸ್ಕೌಟ್ ಮತ್ತು ಗೈಡ್ಸ್‌ನ ಇತರ ರಾಜ್ಯಗಳ **10** ಸದಸ್ಯರೊಡನೆ ಸಂಪರ್ಕ ಬೆಳೆಸಿಕೊಳ್ಳಬೇಕು.

    ಆ) ಆರ್.ಎಸ್.ಎಲ್.ರೊಡನೆ ಯೋಜನೆಯನ್ನು ತಯಾರಿಸಿ, ಮಕ್ಕಳು/ ವೃದ್ಧರು ಅಥವಾ ಹತ್ತಿರದ, ಸೂಕ್ತ ಸ್ಥಳದ ಅನಾಥಾಶ್ರಮ/ ಭಿನ್ನ ಸಾಮರ್ಥ್ಯವುಳ್ಳವರು/ವೃದ್ಧಾಶ್ರಮ ವಾಸಿಗಳಲ್ಲಿ ರೋಗಪೀಡಿತ ವ್ಯಕ್ತಿಗಳಿಗೆ ಸಹಾಯವಾಗುವಂತೆ ಕನಿಷ್ಠ ಒಂದು ತಿಂಗಳ ಕಾಲ ಕೆಲಸ ಮಾಡಬೇಕು.

**ಅಥವಾ**

ತಂಡದ ಸದಸ್ಯರೊಡಗೂಡಿ ಒಂದು ವಾರ ಕಾಲ ಗ್ರಾಮವೊಂದರಲ್ಲಿ ವಾಸ್ತವ್ಯ ಹೂಡಿ ಗ್ರಾಮ ವಾಸಿಗಳ ಜೀವನ ಸಂಪನ್ನತೆಗೆ ಸಹಾಯವಾಗುವ ಆರ್ಥಿಕ ಯೋಜನೆಯನ್ನು ತಯಾರಿಸಿ, ಕಾರ್ಯಗತ ಮಾಡಬೇಕು.

11. ತಿಳುವಳಿಕೆ ಇರಬೇಕಾದುದು:

i) **ಶಿಬಿರ ಕೌಶಲ:** ಅ) ಎರಡು ಹೊದಿಕೆಯ ಟೆಂಟ್ ಹಾಕುವುದು; ತೆಗೆಯುವುದು ಮತ್ತು ಪ್ಯಾಕ್ ಮಾಡುವುದು. ಆ) ಶಿಬಿರದ ಪಾಕಶಾಲೆ ಮತ್ತು ಲ್ಯಾಟ್ರಿನ್‌ಗಳನ್ನು ಒಳಗೊಂಡಂತೆ ಶಿಬಿರದ ವಿನ್ಯಾಸ. ಇ) ಕಗ್ಗಾಡು ವಾಸಿಗಳ ವಿಧಾನದಲ್ಲಿ ಇಬ್ಬರಿಗಾಗುವಷ್ಟು ಅಡಿಗೆ ಮಾಡುವುದು.

ii) **ಅಗ್ರಗಾಮಿತ್ವ:** ಅ) ಡಬಲ್‌ಷೀಟ್ ಬೆಂಡ್, ಏಣಿಗಂಟು, ಕುಣಿಕೆಯೊಳಗೆ ಕುಣಿಕೆ ಗಂಟು ಹಾಕಬೇಕು, ಕಾಣಿಸಬೇಕು. ಆ) ವಿವಿಧ ರೀತಿಯ ಹಿಡಿಕೆ ಮತ್ತು ಲಂಗರು ಹಾಕುವ ವಿಧಾನಗಳನ್ನು ತಿಳಿದಿದ್ದು ಕಾಣಿಸಬೇಕು. ಇ) ಹಿಡಿಕೆಗಳು ಮತ್ತು ಲಂಗರು ವಿಧಾನಗಳನ್ನನುಸರಿಸಿ. ಇತರ ರೋವರ್‌ಗಳ ಜೊತೆಗೂಡಿ, ಒಂದು ಅಗ್ರಗಾಮಿ ಯೋಜನೆಯನ್ನು ನಿರ್ಮಿಸಬೇಕು.

iii) **ನಕ್ಷೆ ಬರೆಯುವುದು:** ಅ) ತ್ರಿಕೋನ ವಿಧಾನವನ್ನು ತಿಳಿದಿರಬೇಕು ಮತ್ತು ಒಂದು ಸಣ್ಣಪ್ರದೇಶದ ನಕ್ಷೆ ತಯಾರಿಸಬೇಕು. ಆ) ಒಂದು ಕಿ.ಮೀ. ದೂರಕ್ಕೆ ಮೀರದ ಮಾರ್ಗವನ್ನು ಅನುಸರಿಸಿ, ರಸ್ತೆ ಕ್ರಮಿಸಿದ ವಿಧಾನದಲ್ಲಿ ನಕ್ಷೆ ತಯಾರಿಸಬೇಕು.

12. **"ನಾನು ಸ್ವತಂತ್ರ" – ಎಫ್‌ಬಿಯಂ**ನ ಬೋಧಕನಾಗಿ 48 ಗಂಟೆಗಳ ಕಾಲ ಕೆಲಸ ಮಾಡಿರಬೇಕು. ಇದನ್ನು ಕನಿಷ್ಠ ವಾರಕ್ಕೆರಡು ಗಂಟೆಯಂತೆ, ಆರು ತಿಂಗಳ ಅವಧಿಯಲ್ಲಿ ಹರಡಿಕೊಂಡು ಮಾಡಬೇಕು. **ಅಥವಾ**

ಈ ಕೆಳ ಕಾಣಿಸಿರುವ ವಿಷಯಗಳಲ್ಲಿ ಯಾವುದಾದರೂ ಎರಡನ್ನು, ವಾರಕ್ಕೆರಡು ಗಂಟೆಯಂತೆ, 6 ತಿಂಗಳ ಅವಧಿಯಲ್ಲಿ ಸಮುದಾಯ ಅಭಿವೃದ್ಧಿ ಯೋಜನೆಯಲ್ಲಿ ಸತತವಾಗಿ ಭಾಗವಹಿಸಿ ಮಾಡಬೇಕು. ಅ) ಲಿಂಗ ಸಮಾನತೆ ಮತ್ತು ಸ್ತ್ರೀಶಕ್ತಿ ಬಲಗೊಳಿಸುವ ಕಾರ್ಯಕ್ರಮ.

ಆ) ಶಿಶುಗಳ (ಮಕ್ಕಳ) ಸಾವನ್ನು ಕಡಿಮೆ ಮಾಡುವುದು. ಇ) ತಾಯಂದಿರ ಆರೋಗ್ಯ ವೃದ್ಧಿ. ಈ) HIV/ಏಡ್ಸ್/ಮಲೇರಿಯಾ ಮತ್ತಿತರ ರೋಗಗಳನ್ನೆದುರಿಸುವುದು. ಉ) ಪರಿಸರದ ಸತತ ಸಂರಕ್ಷಣೆ.

13. ಈ ಕೆಳಗಿನ ಪ್ರವೀಣತಾ ಪದಕಗಳಿಗೆ ಅರ್ಹತೆ ಪಡೆಯಬೇಕು.

    ಅ) **ವಿಪತ್ತು ಸನ್ನದ್ಧತೆ; ಆ) ಅಲೆಮಾರಿ (ರ್‍ಯಾಂಬ್ಲರ್) ಅಥವಾ ಜೀವಪರಿಸರ ಜ್ಞಾನಿ (ಎಕಾಲಜಿಸ್ಟ್)**

14. ಕನಿಷ್ಠ 3 ರಾತ್ರಿಗಳ ಸಾಹಸ ಶಿಬಿರದಲ್ಲಿ ಹೊರಾಂಗಣದಲ್ಲಿ ಟೆಂಟ್‌ನಲ್ಲಿ ವಾಸಿಸಬೇಕು ಅಥವಾ ಇತರ ರೋವರ್‌ಗಳೊಡನೆ ಮರದ ಮೇಲಿನ ಸೂರಿನಲ್ಲಿ ಒಂದು ರಾತ್ರಿಯ ವಾಸವಿರಬೇಕು.

## ಸಮುದ್ರ ರೋವರ್

**ರಾಜ್ಯ ಪುರಸ್ಕಾರ್ ಪರೀಕ್ಷಾಂಶಗಳ ಜೊತೆಗೆ ಸಮುದ್ರ ರೋವರ್ ಆದವನು:**

1. ಹಡಗಿನ ಬಗ್ಗೆ ಸಾಮಾನ್ಯವಾಗಿ ತಿಳಿಯಬೇಕು.
2. ಸೆಮಫೋರ್ ವಿಧಾನದಲ್ಲಿ ಸಂದೇಶ ಕಳುಹಿಸಬೇಕು ಮತ್ತು ಸ್ವೀಕರಿಸಬೇಕು.
3. ರಾಶಿಚಕ್ರಗಳ (Zodiac) ಬಗ್ಗೆ ತಿಳಿದಿರಬೇಕು.
4. ಸಮುದ್ರ ಸಮೀಪದ ಬೀಸುಗಾಳಿ, ಉಬ್ಬರವಿಳಿತಗಳು ಮತ್ತು ಸಮುದ್ರದ ಪ್ರವಾಹಗಳ ಬಗ್ಗೆ ತಿಳಿದಿರಬೇಕು.
5. ನಕ್ಷೆಯಲ್ಲಿ ಮಾರ್ಗವನ್ನು ಗುರುತಿಸಲು ತಿಳಿದಿರಬೇಕು ಮತ್ತು ನಕ್ಷೆಯನ್ನು ಓದಿ ಮಾರ್ಗವನ್ನು ತಿಳಿಯಲು ಬರಬೇಕು.

## ವಾಯು ರೋವರ್

**ರಾಜ್ಯ ಪುರಸ್ಕಾರ್ ಪರೀಕ್ಷಾಂಶಗಳ ಜೊತೆಗೆ ವಾಯು ರೋವರ್ ಆದವನು:**

1. ಅಂತರರಾಷ್ಟ್ರೀಯ ಹೋರಾಟದ ತುರ್ತು ಸಂಕೇತಗಳ ಬಗ್ಗೆ ತಿಳಿದಿರಬೇಕು.
2. ವಿಮಾನ ಮಾದರಿಯನ್ನು ಹಾರಿಸಿ ತೋರಿಸಬೇಕು.
3. ವಿಮಾನ ಮಾದರಿಯಲ್ಲಿನ ತೊಂದರೆಗಳನ್ನು ಸರಿಪಡಿಸುವ ಬಗ್ಗೆ ತಿಳಿದಿರಬೇಕು.

4. ದೇಶದಲ್ಲಿ ಶೌರ್ಯ ಪ್ರಶಸ್ತಿಗಳನ್ನು ಸ್ಥಾಪಿಸಿರುವ ಬಗ್ಗೆ ತಿಳಿದಿರಬೇಕು.
5. ವಿಮಾನದೊಳಗೆ ಅಗ್ನಿ ದುರಂತ ಸಂಭವಿಸಿದಾಗ ಅದನ್ನು ಶಮನ ಮಾಡುವ ಬಗ್ಗೆ ಗಮನಿಸಬೇಕಾದ ನಿಯಮಗಳನ್ನು ತಿಳಿದಿರಬೇಕು.
6. ವಿಮಾನವು ಹಾರುವಾಗ ಅದರ ಮೇಲೆ ಪ್ರಭಾವ ಬೀರುವ ವಿವಿಧ ಶಕ್ತಿಗಳ ಬಗ್ಗೆ ತಿಳಿದಿರಬೇಕು.

**ಗ್ರಾಮೀಣ ರೋವರ್:**

ರೋವರ್‌ಗಳಿಗೆ ನಿಗದಿಪಡಿಸಿರುವ ಎಲ್ಲಾ ಪರೀಕ್ಷಾಂಶಗಳೂ ಗ್ರಾಮೀಣ ರೋವರ್‌ಗಳಿಗೆ ಅನ್ವಯವಾಗುತ್ತದೆ. ಆದರೆ ಕಷ್ಟಕರವಾದ ಅಥವಾ ಗ್ರಾಮೀಣ ರೋವರ್‌ಗಳಿಗೆ ಸಂಬಂಧವಲ್ಲದ ವಿಷಯಗಳನ್ನು, ಸ್ಥಳೀಯ ಚಟುವಟಿಕೆ/ಯೋಜನೆಗಳಿಗೆ ಬದಲು ಮಾಡಿಕೊಳ್ಳಬಹುದು. ಅಂತಹ ಬದಲಾವಣೆಯನ್ನು ಜಿಲ್ಲಾ ಮುಖ್ಯ ಆಯುಕ್ತರು ಮತ್ತು ರಾಜ್ಯ ಸಂಘಟನಾ ಆಯುಕ್ತರ ಶಿಫಾರಸ್ಸಿನ ಮೇಲೆ ರಾಜ್ಯ ಮುಖ್ಯ ಆಯುಕ್ತರು ಅನುಮತಿಸಬೇಕು. ರಾಜ್ಯ ಮುಖ್ಯ ಆಯುಕ್ತರು ಪ್ರಾದೇಶಿಕ ವಿಶಿಷ್ಟತೆಗನುಗುಣವಾಗಿ ಬದಲು ಚಟುವಟಿಕೆಗಳಿಗೆ ಅನುಮತಿ ನೀಡಬಹುದು.

**ಗಮನಿಕೆ:**

1) ರಾಜ್ಯ ಪುರಸ್ಕಾರ್ ಪರೀಕ್ಷಾಂಶಗಳನ್ನು ಮುಗಿಸಿರುವ ನಿಪುಣ್ ರೋವರನು, ರಾಜ್ಯ ಮಟ್ಟದ ಪರೀಕ್ಷಾ ಶಿಬಿರದಲ್ಲಿ ಭಾಗವಹಿಸಬೇಕು. ಈ ಶಿಬಿರವನ್ನು SOC ಅವರ ಮೇಲ್ವಿಚಾರಣೆಯಲ್ಲಿ ರಾಜ್ಯ ಸಂಸ್ಥೆಯು ಏರ್ಪಡಿಸುತ್ತದೆ. ಈ ಶಿಬಿರದಲ್ಲಿ ರಾಜ್ಯ ಪುರಸ್ಕಾರ್ ರೋವರ್ ಹಂತದವರೆಗಿನ ಎಲ್ಲಾ ತಿಳುವಳಿಕೆ, ಕೌಶಲಗಳನ್ನು ಪರೀಕ್ಷಿಸಲಾಗುವುದು. ಈ ಶಿಬಿರದಲ್ಲಿ ಅರ್ಹತೆ ಪಡೆದ ರೋವರನು ರಾಜ್ಯಪುರಸ್ಕಾರ್ ರೋವರ್ ಪ್ರಮಾಣಪತ್ರ ಮತ್ತು ಪದಕವನ್ನು ಪಡೆಯುತ್ತಾನೆ.

2) ರಾಜ್ಯಪುರಸ್ಕಾರ್ ಪದಕವು ಒಂದು ಜೊತೆ ಹತ್ತಿ ಅಥವಾ ಉಣ್ಣೆಯ ಹಸಿರು ಬಣ್ಣದ ಭುಜಪಟ್ಟಿಯಾಗಿರುತ್ತದೆ. ಇದರ ಮೇಲೆ ಕೆಂಪು ಬಣ್ಣದಲ್ಲಿ ಇಂಗ್ಲೀಷ್‌ನ 'R' ಅಕ್ಷರವಿರುತ್ತದೆ. ಈ ಅಕ್ಷರದ ಹಿಂದೆ ಹಳದಿ ಬಣ್ಣದ ಎರಡು ರೇಖೆ ಇರುತ್ತದೆ.

3) ಈ ಪದಕವನ್ನು ಭುಜಪಟ್ಟಿಗಳ ಮೇಲೆ ನಿಪುಣ್ ಪದಕದ ಬದಲು ಧರಿಸಬೇಕು.

4) ರಾಜ್ಯಪುರಸ್ಕಾರ್ ಪದಕವನ್ನು ರಾಜ್ಯಪಾಲರು/ರಾಜ್ಯ ಸಂಸ್ಥೆ ಪೋಷಕರು/ ರಾಜ್ಯಸಂಸ್ಥೆ ಅಧ್ಯಕ್ಷರು, ರಾಜ್ಯ ಮುಖ್ಯ ಆಯುಕ್ತರ ಶಿಫಾರಸ್ಸಿನ ಮೇಲೆ ಪ್ರದಾನ ಮಾಡುತ್ತಾರೆ. **ನಿರ್ಬಂಧಿತ (Compelling) ಸಂದರ್ಭಗಳಲ್ಲಿ** ರಾಜ್ಯ ಮುಖ್ಯ ಆಯುಕ್ತರು ಈ ಪದಕವನ್ನು ಹಿಂಪಡೆಯಬಹುದು.

## 14. ರಾಷ್ಟ್ರಪತಿ ರೋವರ್ ಪ್ರಶಸ್ತಿ




1. ರಾಷ್ಟ್ರಪತಿಗಳು ಭಾರತ್ ಸ್ಕೌಟ್ ಮತ್ತು ಗೈಡ್ಸ್ ಸಂಸ್ಥೆಯ ಮಹಾಪೋಷಕರು. ಭಾರತ ಒಕ್ಕೂಟದ ರಾಷ್ಟ್ರಪತಿಗಳ ಸಂದೇಶವನ್ನೊಳಗೊಂಡ ಪ್ರಮಾಣ ಪತ್ರವು ಸಂಸ್ಥೆಯ ಅತ್ಯುನ್ನತ ಪ್ರಶಸ್ತಿಯಾಗಿದ್ದು ರಾಷ್ಟ್ರಪತಿ ರೋವರ್‌ನ ಪ್ರಶಸ್ತಿಯನ್ನಾಗಿ ನೀಡ ಲಾಗುವುದು. ಈ ಪದಕವು ಸ್ಕೌಟ್ ಚಳವಳಿಯ ವಿಶಿಷ್ಟ ಹಾಗೂ ಅನನ್ಯ ಪದಕವಾಗಿದೆ.

2. ರಾಜ್ಯಪುರಸ್ಕಾರ್ ರೋವರ್ ಆದವನು ರಾಷ್ಟ್ರಪತಿ ರೋವರ್ ಪ್ರಶಸ್ತಿ ಸ್ವೀಕರಿಸಲು ಕನಿಷ್ಠ ಒಂದು ವರ್ಷ ಅವಧಿ ಸೇವೆ ಸಲ್ಲಿಸಬೇಕು.

3. 25 ವರ್ಷ ಸಂಪೂರ್ಣಗೊಂಡ ರೋವರ್ ರಾಷ್ಟ್ರಪತಿ ರೋವರ್ ಪ್ರಶಸ್ತಿ ಸ್ವೀಕರಿಸಲು ಅನರ್ಹನು.

4. ರಾಜ್ಯಪುರಸ್ಕಾರ್ ರೋವರ್‌ನು, ರಾಷ್ಟ್ರಪತಿ ರೋವರ್ ಪ್ರಶಸ್ತಿ ಪಡೆಯಲು ಸಿದ್ಧನಾಗುತ್ತಿರುವ ಬಗ್ಗೆ, ರೋವರ್ ಸ್ಕೌಟ್ ನಾಯಕರು ರಾಜ್ಯ ಸಂಸ್ಥೆಯಲ್ಲಿ ಲಭ್ಯವಿರುವ ನೋಂದಣಿ ಪತ್ರವನ್ನು ಪಡೆದು ಸೂಕ್ತ ಮಾರ್ಗದಲ್ಲಿ ರಾಷ್ಟ್ರೀಯ ಸಂಸ್ಥೆಯಲ್ಲಿ ನೋಂದಾಯಿಸಬೇಕು. **RSL** ಅನುಪಸ್ಥಿತಿಯಲ್ಲಿ **ARSL** ಸಹ ನೋಂದಾಯಿಸಬಹುದು.

5. RSLನು ತಂಡದ ಮೊತ್ತ ರೋವರ್‌ಗಳಲ್ಲಿ (24 ಮೀರಿರಬಾರದು) ಶೇ. 25ರಷ್ಟು ರೋವರ್‌ಗಳನ್ನು ಮಾತ್ರ ವರ್ಷದಲ್ಲಿ ರಾಷ್ಟ್ರಪತಿ ರೋವರ್ ಪ್ರಶಸ್ತಿಗೆ ಶಿಫಾರಸ್ಸು ಮಾಡಬಹುದು. ವಿಶೇಷ ಸಂದರ್ಭಗಳಲ್ಲಿ ಜಿಲ್ಲಾ ಮುಖ್ಯ ಆಯುಕ್ತರ ಶಿಫಾರಸ್ಸಿನ ಮೇಲೆ ರಾಜ್ಯ ಮುಖ್ಯ ಆಯುಕ್ತರು ವರ್ಷದಲ್ಲಿ ಶೇ. 50ರಷ್ಟು ರೋವರ್‌ಗಳಿಗೆ ಶಿಫಾರಸ್ಸು ಮಾಡಲು ಅನುಮತಿ ನೀಡಬಹುದು.

6. ಎಲ್ಲಾ ಅವಶ್ಯಕ ಅಂಶಗಳಲ್ಲಿಯೂ ತೇರ್ಗಡೆ ಹೊಂದಿದ ರಾಜ್ಯಪುರಸ್ಕಾರ್ ರೋವರನು ರಾಜ್ಯಮಟ್ಟದ ಟೆಸ್ಟಿಂಗ್ ಕ್ಯಾಂಪ್‌ನಲ್ಲಿ ಪರೀಕ್ಷಿತನಾಗಿ SOC ಅವರಿಂದ ಪ್ರಮಾಣಪತ್ರ ಪಡೆಯಬೇಕು. ಆನಂತರದಲ್ಲಿ ಸಹಾಯಕ ನಿರ್ದೇಶಕರ ಮೇಲ್ವಿಚಾರಣೆಯಲ್ಲಿ ರಾಷ್ಟ್ರ ಸಂಸ್ಥೆಯವರು ನಿರ್ವಹಿಸುವ ರಾಷ್ಟ್ರಪತಿ ರೋವರ್ ಪ್ರಶಸ್ತಿ ಪರೀಕ್ಷಾ ಶಿಬಿರದಲ್ಲಿ ಭಾಗವಹಿಸಬೇಕು.

7. ರಾಷ್ಟ್ರಪತಿ ಪ್ರಶಸ್ತಿ ಪರೀಕ್ಷಾ ಶಿಬಿರದ ವೇಳೆ ರೋವರನು ತನ್ನ ಪ್ರಗತಿದಾಯಕ ತಃಖ್ತೆಯನ್ನು ಸಾದರಪಡಿಸಬೇಕು.

**ರಾಷ್ಟ್ರಪತಿ ರೋವರ್ ಪ್ರಶಸ್ತಿ ಸ್ವೀಕರಿಸಲು ರಾಜ್ಯಪುರಸ್ಕಾರ್ ರೋವರ್ ಆದವನು ಕೆಳಗಿನ ಅಂಶಗಳಲ್ಲಿ ತೇರ್ಗಡೆಯಾಗಬೇಕು.**

1. ಈ ಕೆಳಕಂಡ ಯಾವುದಾದರೊಂದು ವಿಷಯವನ್ನು ಆಯ್ದುಕೊಂಡು ತಂಡ ಪರಿಸತ್ತಿನಲ್ಲಿ ಚರ್ಚಿಸಿ ವರದಿಯನ್ನು ಒಪ್ಪಿಸಬೇಕು.

   ಅ) ಮಾಹಿತಿ ಮತ್ತು ಅಂಕಿ–ಅಂಶ ಸಮೇತ ಅನುಮೋದನೆಗಾಗಿ ನಿಮ್ಮ ರೋವರ್ ಸ್ಕೌಟ್ ನಾಯಕರೊಡನೆ ಚರ್ಚಿಸಬೇಕು. ನೀವು ಸಮುದಾಯಕ್ಕೆ ಹೇಗೆ ಉತ್ತಮ ರೀತಿಯ ಸಹಾಯಕರಾಗಬಹುದೆಂಬುದನ್ನು ನಿರ್ಧರಿಸಬೇಕು ಮತ್ತು ಅವುಗಳಲ್ಲಿ ಆದ್ಯತೆಗಳನ್ನು ತಯಾರು ಮಾಡಬೇಕು.

   ಆ) i) ಪ್ರಸ್ತುತ ವಿಶ್ವವಿದ್ಯಮಾನಗಳು ii) ವೋಸಂನ 2 ಪ್ರದೇಶಗಳು iii) ರಾಷ್ಟ್ರೀಯ ವಿದ್ಯಮಾನಗಳು – ನಮ್ಮ ಸರ್ಕಾರ / ರಾಷ್ಟ್ರ ಅಭಿವೃದ್ಧಿ ಯೋಜನೆಗಳು ಮತ್ತು ವ್ಯವಸ್ಥೆ / ರಾಷ್ಟ್ರ ಶಿಕ್ಷಣ ನೀತಿ / ಸೇವಾ ಸಂಸ್ಥೆಗಳು / ಸಹಕಾರ ಸಂಸ್ಥೆಗಳು ಇತ್ಯಾದಿ.

2. ಆರೋಗ್ಯ ಮತ್ತು ಆಹಾರೋತ್ಪನ್ನಗಳು ಅಥವಾ ಪರಿಸರ ಮಾಲಿನ್ಯ ನಿರ್ಮೂಲನೆ ಪಾಕೀಜು ಕಾರ್ಯಕ್ರಮಗಳ ಬಗ್ಗೆ ಒಂದು ಸಮುದಾಯ ಅಭಿವೃದ್ಧಿ ಕಾರ್ಯಕ್ರಮವನ್ನು ನಿಮ್ಮ ಸ್ಥಳದಲ್ಲಿ ಅಳವಡಿಸಿಕೊಂಡು ಸ್ಥಾನಿಕ ಯೋಗಿ ತಂಡ ಪರಿಷತ್‌ನ ಅನುಮೋದನೆ ಪಡೆದು, ಕನಿಷ್ಠ 3 ತಿಂಗಳ ಕಾಲ ಕೆಲಸ ಮಾಡಿ ಅದರ ಸಾಧನೆಯನ್ನು ತಂಡ ಪರಿಷತ್ತಿಗೆ ವರದಿ ಸಲ್ಲಿಸಬೇಕು.

3. ಜಿಲ್ಲಾ/ರಾಜ್ಯ/ರಾಷ್ಟ್ರಮಟ್ಟದ ಶಿಬಿರದಲ್ಲಿ ಕನಿಷ್ಠ 5 ದಿನಗಳ ಸೇವೆ ಸಲ್ಲಿಸಬೇಕು.

4. ವಾರಕ್ಕೊಮ್ಮೆ ಕನಿಷ್ಠ 2 ತಿಂಗಳ ಅವಧಿಯಲ್ಲಿ 30 ಗಂಟೆಗಳಿಗೆ ಕಡಿಮೆ ಇಲ್ಲದಂತೆ ಸಮುದಾಯ ಸೇವಾ ಯೋಜನೆಯಲ್ಲಿ ಭಾಗವಹಿಸಬೇಕು.

5. ಮತ್ತೊಬ್ಬ ರೋವರ್‌ನೊಡನೆ 24 ಗಂಟೆಗಳ ಕಾಲದ, ಹೊರಾಂಗಣದಲ್ಲಿ ಸಹಜ ಸಂಪನ್ಮೂಲ ವಸ್ತುಗಳ ಸಹಾಯದಿಂದ ಬದುಕಿ ಉಳಿಯುವ ಚಾರಣದಲ್ಲಿ ಪಾಲ್ಗೊಳ್ಳಬೇಕು. **ಅಥವಾ**

   ತಂಡದ ಗ್ರಾಮೀಣ ಪ್ರದೇಶದ ಒಂದು ರಾತ್ರಿಯ ಸಾಹಸ ಚಾರಣದಲ್ಲಿ ಭಾಗವಹಿಸಬೇಕು. **ಅಥವಾ**

   ಭಾರತದ ಹೊರಗೆ ಯಾವುದಾದರೂ ಅಂತಾರಾಷ್ಟ್ರೀಯ ಸಂಘಟನೆಯಲ್ಲಿ ಭಾಗವಹಿಸಬೇಕು. **ಅಥವಾ**

   ಅಂತರಾಷ್ಟ್ರೀಯ ಸಾಹಸ ಕಾರ್ಯಕ್ರಮದಲ್ಲಿ ಭಾಗವಹಿಸಬೇಕು.

6. ಅಂತರ್ಜಾಲದ ಮೂಲಕ ಇತರ ರಾಜ್ಯಗಳ, ದೇಶಗಳ ಸ್ಕೌಟ್ ಚಳವಳಿಯ, ಕನಿಷ್ಠ 20 ಸದಸ್ಯರೊಂದಿಗೆ ಮೈತ್ರಿಯನ್ನು ಸಾಧಿಸಬೇಕು.

   **ಅಥವಾ**

   ಮೆಸೆಂಜರ್ ಆಫ್ ಪೀಸ್ ಸದಸ್ಯನಾಗಬೇಕು ಮತ್ತು MOP ವೆಬ್‌ಸೈಟ್‌ನಲ್ಲಿ ಕನಿಷ್ಠ 5 ಯೋಜನೆಗಳನ್ನು ಅಪ್‌ಲೋಡ್ ಮಾಡಬೇಕು. **ಅಥವಾ**

   ತಂಡದ ವತಿಯಿಂದ "ಗೀತ್‌ಮಂಚ್" ಸಂಘಟಿಸಿ, BSG ಪ್ರಕಟನೆಗಳ ಉದಾ: ಗೀತ್‌ಭಾರತಿ, ಹಾಡುಗಳನ್ನು ಹಾಡಬೇಕು.

   ಸ್ವರ್ಣಸ್ವರ ಲಹರಿ, ದೇಶಭಕ್ತಿಗೀತೆಗಳು, ಜಾತ್ಯಾತೀತತೆಯನ್ನು ಸಾರುವ ಗೀತೆಗಳು, ರಾಷ್ಟ್ರೈಕ್ಯತಾ ಗೀತೆಗಳು ಇತ್ಯಾದಿ. ಇವುಗಳನ್ನು ಗ್ರಾಮ, ಪಟ್ಟಣ, ನಗರಗಳ ಸಾರ್ವಜನಿಕ ವೇದಿಕೆಯಲ್ಲಿ ಹಾಡಿ, ಸಂಸ್ಥೆಯ ಅಸ್ತಿತ್ವವನ್ನು ಕಾಣುವಂತೆ ಮಾಡಬೇಕು.

7. ಈ ಕೆಳಕಾಣಿಸಿರುವ ಪ್ರವೀಣತಾ ಪದಕಗಳಿಗೆ ಅರ್ಹತೆ ಪಡೆಯಬೇಕು.

   i) ವಿಪತ್ತು ನಿರ್ವಹಣೆ

   ii) ಕೆಳಗಿನ ರೋವರ್ ಪ್ರವೀಣತಾ ಪದಕಗಳಲ್ಲೊಂದು.

   ಅ) ಪರಂಪರೆ ಆ) ಏಡ್ಸ್ ಜಾಗೃತಿ ಇ) ಸಂರಕ್ಷಣೆ

   ಈ) ಕುಟುಂಬ ಜೀವನ ಶಿಕ್ಷಣ ಉ) ರಕ್ತದಾನಿ

## ಸಮುದ್ರ ರೋವರ್

**ರಾಷ್ಟ್ರಪತಿ ರೋವರ್ ಪ್ರಶಸ್ತಿ ಪರೀಕ್ಷಾಂಶಗಳ ಜೊತೆಗೆ ಸಮುದ್ರ ರೋವರ್ ಆದವನು:**

1. ಜಿಗಿಯಬೇಕು ಮತ್ತು ನೀರಿನೊಳಗೆ ಕನಿಷ್ಠ ಹತ್ತು ಮೀಟರ್ ಈಜಬೇಕು.
2. ನೀರಿನಲ್ಲಿ ಮುಳುಗಡೆಯಾಗುತ್ತಿರುವ ವ್ಯಕ್ತಿಯನ್ನು ರಕ್ಷಿಸುವುದನ್ನು ಕಲಿಯಬೇಕು.
3. ದೇಶದಲ್ಲಿನ ಹಡಗು ವ್ಯಾಪಾರದ ಬಗ್ಗೆ ಸಾಮಾನ್ಯ ತಿಳುವಳಿಕೆ ಇರಬೇಕು.
4. ದೇಶದ ನೌಕಾದಳ ಮತ್ತು ಅದರ ವಿವಿಧ ಹಂತಗಳ ಪದವಿಗಳ ಬಗ್ಗೆ ಸಾಮಾನ್ಯ ತಿಳುವಳಿಕೆ ಇರಬೇಕು.
5. ರಾಶಿ ಚಕ್ರ (Zodiac)ಕ್ಕೂ ಮೀರಿ ಹೊರಗಿನ 10 ತಾರಾಮಂಡಲಗಳ ಬಗ್ಗೆ ತಿಳಿದಿರಬೇಕು.
6. ಸಮುದ್ರಯಾನದಲ್ಲಿ ಉಪಯೋಗಿಸುವ 3 ವಿಧದ ಹೆಣಿಗೆಗಳು ಹಾಗೂ 10 ಗಂಟುಗಳ ಬಗ್ಗೆ ತಿಳಿದಿರಬೇಕು (ಸಮುದ್ರದಲ್ಲಿ ಉಪಯೋಗಿಸುವ ಬೆಂಡ್ಸ್ & ಹಿಚಸ್).
7. ಮುಂಜಾಗ್ರತಾ ಕ್ರಮಗಳನ್ನನುಸರಿಸಿ ನಾಲ್ಕು ಕಿ.ಮೀ.ಗಳ ದೂರ ಮೀರದಂತೆ ಮಕ್ಕಳಿಗೆ, ರಕ್ಷಿತ/ಯಾನವನ್ನು ಏರ್ಪಡಿಸಬೇಕು.

## ವಾಯುರೋವರ್

**ರಾಷ್ಟ್ರಪತಿ ರೋವರ್ ಪ್ರಶಸ್ತಿ ಪರೀಕ್ಷಾಂಶಗಳ ಜೊತೆಗೆ ವಾಯುರೋವರ್ ಆದವನು**

1. ವಿಮಾನ ಮಾದರಿಯನ್ನು ಉಪಯೋಗಿಸಿ ವಿಮಾನ ಚಾಲನ ಕೌಶಲ್ಯವನ್ನು ಪ್ರಸ್ತುತಪಡಿಸಬೇಕು. ಅಥವಾ ಮೂರು ಬಾರಿ ಗ್ಲೈಡರ್‌ನಲ್ಲಿ ಹಾರಿ ಅನುಭವ ಪಡೆಯಬೇಕು ಅಥವಾ ಕನಿಷ್ಠ ಅರ್ಧಗಂಟೆಗಳ ಕಾಲ ವಿಮಾನ ಹಾರಾಟದ ಅನುಭವ ಪಡೆದಿರಬೇಕು.
2. ವಿಶ್ವ ಭೂಪಟದ ಮೇಲೆ ಅಂತರರಾಷ್ಟ್ರೀಯ ವಿಮಾನ ಕ್ಷೇತ್ರಗಳು ಹಾಗೂ ವಿಮಾನ ತಂಗುದಾಣಗಳನ್ನು ಗುರುತಿಸಬೇಕು.

3. ನೆರೆಹೊರೆಯ ರಾಷ್ಟ್ರಗಳಲ್ಲಿ ಬಳಸುವ ಯುದ್ಧ ವಿಮಾನಗಳ ಬಗ್ಗೆ ತಿಳಿದಿರಬೇಕು.

4. ಡಬ್ಲ್ಯೂ.ಆರ್.; ಆರ್.ಟಿ.; ಎ.ಎಲ್.ಡಿ.ಎಸ್.; ಎಲ್.ಎ.ಎಂ.ಎ., ಬಳಸುವ ಸಂಕೇತಗಳ ಬಗ್ಗೆ ತಿಳಿದಿರಬೇಕು ಹಾಗೂ ಸಿಡಿಮದ್ದು ಮತ್ತು ಹೊಗೆ ಗುಂಡುಗಳ ಬಗ್ಗೆ ಸಹ ತಿಳಿದಿರಬೇಕು.

**ಗ್ರಾಮೀಣ ರೋವರ್**

1. ರಾಜ್ಯದ ಮತ್ತೊಂದು ಜಿಲ್ಲೆಯ ಐತಿಹಾಸಿಕ, ಕೈಗಾರಿಕ, ಧಾರ್ಮಿಕ ಪ್ರದೇಶಗಳಿಗೆ ಭೇಟಿನೀಡಿ, ಅವುಗಳ ಸಂಪನ್ಮೂಲಗಳು ಹಾಗೂ ವ್ಯವಸ್ಥೆಯ ಬಗ್ಗೆ ತಾನು ಗಮನಿಸಿದ ವಿವರಗಳನ್ನು ಸಂಗ್ರಹಿಸಿ, ಸಿದ್ಧಪಡಿಸಬೇಕು.

2. ಎರಡು ಸಸಿಗಳನ್ನು ನೆಟ್ಟು ಒಂದು ವರ್ಷಕಾಲ ಅವುಗಳ ಬೆಳವಣಿಗೆಯನ್ನು ನೋಡಿಕೊಳ್ಳಬೇಕು.

3. ಆರೋಗ್ಯ ಅಥವಾ ಆಹಾರೋತ್ಪಾದನೆ ಅಥವಾ ಪಾಕೀಜು ನೈರ್ಮಲ್ಯ ಕಾರ್ಯಕ್ರಮದ ಬಗ್ಗೆ, ಸಮುದಾಯ ಅಭಿವೃದ್ಧಿ ಕಾರ್ಯಕ್ರಮವನ್ನು ಅಳವಡಿಸಿಕೊಂಡು ಅದರ ಸಾಧನೆಯ ವರದಿಯನ್ನು ತಂಡ ಪರಿಷತ್ತಿಗೆ ತೋರಿಸಬೇಕು.

4. ತನ್ನ ಗ್ರಾಮದ ಅಥವಾ ಸ್ಥಳೀಯ ಜಾತ್ರೆ / ಮೇಳದಲ್ಲಿ ಸಮಾಜಸೇವೆಯನ್ನು ರೂಪಿಸಿ ತಂಡದೊಂದಿಗೆ ಭಾಗವಹಿಸಬೇಕು ಮತ್ತು ಕನಿಷ್ಠ 6 ಗಂಟೆಯಾದರೂ ಸೇವೆಯನ್ನು ಸಲ್ಲಿಸಬೇಕು.

5. ಹಳ್ಳಿಗಾಡು ಪ್ರದೇಶದಲ್ಲಿ ಒಂದು ರಾತ್ರಿಯ ಸಾಹಸ ಚಾರಣದಲ್ಲಿ ಭಾಗವಹಿಸಬೇಕು.

6. **ಪ್ರವೀಣತಾ ಪದಕಗಳು:** ಕೆಳಗಿನವುಗಳಲ್ಲಿ ಪ್ರತಿಗುಂಪಿಗೆ ಒಂದು ಪದಕದಂತೆ ತಿಳಿದಿರಬೇಕು ಮತ್ತು ಅದನ್ನು ಸಾದರಪಡಿಸಬೇಕು.

   a) ಸಮಾಜಸೇವಕ, ಪಾಕೀಜು ಪ್ರವರ್ತಕ, ಸಾರ್ವಜನಿಕ ಆರೋಗ್ಯಕಾರ, ಪ್ರಾಣಿಗಳ ಸ್ನೇಹಿತ ಮತ್ತು ಗ್ರಾಮೀಣ ಸೇವಕ.

   b) ಬುಟ್ಟಿ ಹೆಣೆಯುವುದು, ಮರಗೆಲಸಗಾರ, ರೈತ, ಹೈನುಗಾರಿಕೆ, ಸಮುದ್ರಬೆಸ್ತ, ಒಂಟೆಪಾಲಕ.

7. ಗ್ರಾಮ ಅಭಿವೃದ್ಧಿ ಮತ್ತು ಸಾಮಾಜಿಕ ಕ್ಷುದ್ರಶಕ್ತಿಗಳ ನಿರ್ಮೂಲನೆಯ ಬಗ್ಗೆ ಗ್ರಾಮ ಪಂಚಾಯ್ತಿಯ ಸಹಕಾರದೊಂದಿಗೆ ಗ್ರಾಮಸಭೆಯನ್ನು ಸಂಘಟಿಸಿ, ಗ್ರಾಮಸ್ಥರಲ್ಲಿ ಅರಿವು ಮೂಡಿಸಬೇಕು.

**ಸೂಚನೆ:** ಮೇಲ್ಕಂಡ ಗ್ರಾಮೀಣ ರೋವರ್ ಪರೀಕ್ಷಾಂಶಗಳ ಜೊತೆಗೆ, ಎ.ಪಿ.ಆರ್.ಓ. ಭಾಗ–2ರಲ್ಲಿ ನಮೂದಿಸಿರುವ ನಿಯಮ ಮತ್ತು ಕಾರ್ಯವಿಧಾನಗಳು ರೋವರ್ ಸ್ಕೌಟ್‌ಗಳಿಗೆ ಅನ್ವಯಿಸುವಂತೆ ಗ್ರಾಮೀಣ ರೋವರ್‌ಗಳಿಗೂ ಅನ್ವಯಿಸುತ್ತವೆ. ಆದರೆ ಗ್ರಾಮೀಣ ರೋವರ್‌ಗಳಿಗೆ ಸಂಬಂಧಿಸದೆ ಇರುವ / ಕಷ್ಟಕರವೆನಿಸುವ ವಿಷಯಗಳನ್ನು DCC ಮತ್ತು SOC ಅವರ ಶಿಫಾರಸ್ಸು ಮೇರೆಗೆ SCC ಅವರು, ಸೂಕ್ತವೆನಿಸುವ ಸ್ಥಳೀಯ ಚಟುವಟಿಕೆ ಯೋಜನೆಗಳಿಗೆ ಅನುಮತಿ ನೀಡುತ್ತಾರೆ. ಆ ಬಗ್ಗೆ ಪ್ರಮಾಣ ಪತ್ರವನ್ನು ಪರೀಕ್ಷಾ ಶಿಬಿರದಲ್ಲಿ ಸಾದರಪಡಿಸಬೇಕು.

i) ಭಾರತದ ರಾಷ್ಟ್ರಪತಿಯವರು ಪ್ರಧಾನ ರಾಷ್ಟ್ರೀಯ ಆಯುಕ್ತರ ಶಿಫಾರಸ್ಸು ಮೇರೆಗೆ ರಾಷ್ಟ್ರಪತಿರೋವರ್ ಪ್ರಶಸ್ತಿಯನ್ನು ನೀಡುತ್ತಾರೆ.

ರಾಷ್ಟ್ರಪತಿರೋವರ್ ಪ್ರಶಸ್ತಿ ಮತ್ತು ಪದಕವು ರಾಷ್ಟ್ರೀಯ ಸಂಸ್ಥೆಯ ಸ್ವತ್ತಾಗಿರುತ್ತದೆ ಮತ್ತು ಪ್ರಧಾನ ರಾಷ್ಟ್ರೀಯ ಆಯುಕ್ತರು ಅನಿವಾರ್ಯ ಸಂದರ್ಭಗಳಲ್ಲಿ ಅದನ್ನು ಕೇಳಿ ಹಿಂದೆ ಪಡೆಯಬಹುದು.

ii) ರಾಷ್ಟ್ರಪತಿರೋವರ್ ಪ್ರಶಸ್ತಿಯನ್ನು ಪ್ರಧಾನ ರಾಷ್ಟ್ರೀಯ ಆಯುಕ್ತರು ಅನುಮೋದಿಸುವ ಅಧಿಕಾರವನ್ನು ಹೊಂದಿರುವ ಪದಕ ಪರೀಕ್ಷೆ, ಸೇವೆ ಮತ್ತಿತರ ನಿರ್ದೇಶನವನ್ನು ಕಾಲಾನುಕಾಲಕ್ಕೆ ನಿರ್ದಿಷ್ಟ ಅವಧಿಗೆ ನೀಡುತ್ತಾರೆ.

iii) ರಾಜ್ಯಪುರಸ್ಕಾರ್ ರೋವರ್ ಆದವನು ರಾಷ್ಟ್ರಪತಿ ರೋವರ್ ಪ್ರಶಸ್ತಿಯ ಪರೀಕ್ಷಾಂಶಗಳನ್ನು ಯಶಸ್ವಿಯಾಗಿ ಪೂರ್ಣಗೊಳಿಸಿ ತನ್ನ ಸಾಧನೆಯನ್ನು ನಿಯಮಿತ ಅರ್ಜಿಯಲ್ಲಿ ತುಂಬಿಸಿ. ಸೂಕ್ತ ಮಾರ್ಗದ ಮೂಲಕ ರಾಷ್ಟ್ರೀಯ ಸಂಸ್ಥೆಗೆ ಸಲ್ಲಿಸಬೇಕು. ಸ್ಕೌಟ್ ಜೀವನ ಶೈಲಿಗೆ ತಾನು ಉದಾಹರಣೆಯಾಗಿರುವ ಬಗ್ಗೆ ತನ್ನ ತಂಡ ಪರಿಷತ್ತಿಗೆ ದೃಢಪರಿಸಿರಬೇಕು.

iv) ರಾಷ್ಟ್ರಪತಿರೋವರ್ ಪದಕವನ್ನು ಎಡತೋಳಿನ ಮೇಲೆ ಧರಿಸಬೇಕು.

v) ರೋವರನು ಘಟಕ ನಾಯಕರುಗಳ ಯಾವುದೇ ತರಬೇತಿ ಶಿಬಿರದಲ್ಲಿ ಭಾಗವಹಿಸಿ ತರಬೇತಿ ಪಡೆದಿದ್ದಲ್ಲಿ, ಅವನು ರಾಷ್ಟ್ರಪತಿ ಪ್ರಶಸ್ತಿಗೆ ಅರ್ಹನಾಗುತ್ತಾನೆ.

## 15. ರೋವರ್ ಪ್ರವೀಣತಾ ಪದಕಗಳು

### ಗುಂಪು–1 ದೇಹಾರೋಗ್ಯ

1. ಓಟಗಾರ (Athlet)
2. ಕುಸ್ತಿಪಟು (Boxer)
3. ಆರೋಹಿ (Climber)
4. ಅನ್ವೇಷಕ (Explorer)
5. ನಾನು ಸ್ವತಂತ್ರ (FBM)
6. ಅಂಗ ಸಾಧಕ (Gymnast)
7. ಅಲೆಮಾರಿ (Rambler)
8. ಶಿಲಾರೋಹಿ (Rock Climber)
9. ಸ್ವರಕ್ಷಣೆ (Self defence)
10. ಕ್ರೀಡಾಪಟು (Sportsman)
11. ಯೋಗ ಬೋಧಕ (Yoga Instructor)

### ಗುಂಪು–2 ಸಚ್ಚಾರಿತ್ರ್ಯ

1. ಕುಟುಂಬ ಜೀವನ ಶಿಕ್ಷಕ (Family life educator)
2. ಪರಂಪರೆ (Heritage)
3. ವ್ಯಕ್ತಿತ್ವ ವಿಕಾಸ (Personality Development)
4. ಸಾರ್ವಜನಿಕ ಭಾಷಣಕಾರ (Public Speaker)
5. ವಿಶ್ವ ಮೈತ್ರಿ (World Friendship)

### ಗುಂಪು–3: ಹವ್ಯಾಸ

1. ಸೆಲ್‌ಫೋನ್ ಶಿಲ್ಪಕಾರ (Cell Phone Mechanic)
2. ಕಂಪ್ಯೂಟರ್ ಕೆಲಸಗಾರ (Computer Operator)
3. ಮರಳುಗಾಡು ವಾಸಿ (Desert Folk)
4. ವಸ್ತ್ರ ವಿನ್ಯಾಸಗಾರ (Fashion Designer)
5. ಲಲಿತ ಕಲೆ (Fine Art)
6. ಪ್ರಥಮ ಚಿಕಿತ್ಸಕ (First Aider)
7. ಕ್ಷೌರಿಕ (Hair Dresser)
8. ಮಾಹಿತಿ ತಂತ್ರಜ್ಞಾನ (Information Technology)

9. ಬಾತ್ಮಿದಾರ (Journalist)
10. ರೂಪದರ್ಶಕತೆ (Modelling)
11. ವಾಹನ ಕರ್ಮಿ (Motor Mechanic)
12. ಛಾಯಾಚಿತ್ರ ಗ್ರಾಹಕ (Photographer)
13. ದರ್ಜಿ (Tailor)
14. ವೆಬ್ ಸುರಕ್ಷತೆ (Web safety)

**ಗುಂಪು–4: ಸೇವೆ**

1. ಏಡ್ಸ್ ಜಾಗೃತಿ (AIDS Awareness)
2. ಚರಚಿಕಿತ್ಸಕ (Ambulance Man)
3. ರಕ್ತದಾನಿ (Blood donor)
4. ನಾಗರಿಕ ರಕ್ಷಣೆ (Civil Defence)
5. ಸಮುದಾಯ ಕಾರ್ಯಕರ್ತ (Community Worker)
6. ವಿಪತ್ತು ನಿರ್ವಹಣೆ (Disaster Management)
7. ವಿಪತ್ತು ಸನ್ನದ್ಧತೆ (Disaster Preparedness )
8. ಸಾಕ್ಷರತೆ (Literacy)
9. ಜನಸಂಖ್ಯಾ ಶಿಕ್ಷಣ (Population Education)
10. ಮಾಲಿನ್ಯ ನಿರೋಧ (Pollution Control)
11. ಗ್ರಾಮೀಣ ಕಾರ್ಯಕರ್ತ (Rural Worker)
12. ಪಾಕೀಜು ಪ್ರವರ್ತಕ (Sanitation Promotor)

**ಗುಂಪು–5: ಸಂರಕ್ಷಣೆ**

1. ಪರಿಸರ ಜ್ಞಾನಿ (Ecologist)
2. ಚೈತನ್ಯ ರಕ್ಷಣೆ (Energy Conservation)
3. ವನವಾಸಿ (Forester)
4. ಮಣ್ಣು ಸಂರಕ್ಷಣೆ (Soil Conservation)
5. ವಿಶ್ವ ಸಂರಕ್ಷಣೆ (World Conservation)
6. ವಿಶ್ವ ಸ್ಕೌಟ್ ಪರಿಸರ (World Scout environment)

**ಸಮುದ್ರ ರೋವರ್‌ಗಳಿಗೆ ಮಾತ್ರ**

1. ಮೊದಲ ತೊಡಕು (First Knot) 2. ಎರಡನೆ ತೊಡಕು (Second Knot)

**ವಾಯು ರೋವರ್‌ಗಳಿಗೆ ಮಾತ್ರ**

1. ವೈಮಾನಿಕ (Airman)
2. ವಾಯು ಶಿಲ್ಪಕಾರ (Air Mechanic)
3. ವಾಯು ಸಂಶೋಧಕ (Air Navigator)
4. ವಿಮಾನ ಗುರುತಿಸುವವ (Air Spoter)
5. ವಿಮಾನ ಚಾಲಕ (Aviator)
6. ಹಾರಾಟ ಕೊಟ್ವಾರಿ (Flight Steward)
7. ಪವನಶಾಸ್ತ್ರಜ್ಞ (Meteorologist)

**ಸೂಚನೆ:**

i. ಪ್ರತಿ ರೋವರನೂ ರೋವರ್ ಪ್ರವೀಣತಾ ಪದಕಗಳಲ್ಲಿ ಉತ್ತೀರ್ಣನಾಗಲು ಅರ್ಹನಾಗಿರುತ್ತಾನೆ.

ii) ಈ ಪದಕಗಳ ಪರೀಕ್ಷಾಂಶಗಳನ್ನು ಅನುಬಂಧದಲ್ಲಿ ಕೊಡಲಾಗಿದೆ.

iii) ಸ್ಥಳೀಯ ಸಂಸ್ಥೆ/ ಜಿಲ್ಲಾ ಸಂಸ್ಥೆಯವರಿಂದ ನೇಮಿಸಲ್ಪಟ್ಟ ಸ್ವತಂತ್ರ ಪರೀಕ್ಷಕರಿಂದ, ತೃಪ್ತಿಕರವಾಗಿ ಪರೀಕ್ಷಾಂಶಗಳನ್ನು ಮುಗಿಸಿದ ನಂತರ, ಪ್ರವೀಣತಾ ಪದಕಗಳನ್ನು ಪರೀಕ್ಷಕರು ನೀಡುವ ಪ್ರಮಾಣ ಪತ್ರದ ಆಧಾರದ ಮೇಲೆ, ಸ್ಥಳೀಯ/ಜಿಲ್ಲಾ ಸಂಸ್ಥೆಯವರು ನೀಡುತ್ತಾರೆ.

iv) ಈ ಎಲ್ಲಾ ಪ್ರವೀಣತಾ ಪದಕಗಳನ್ನೂ (ನಿರ್ದಿಷ್ಟವಾಗಿ ಸೂಚಿಸದೇ ಇದ್ದಲ್ಲಿ) ಬಲತೋಳಿನ ಮೇಲೆ ಸಮಾನಾಂತರ ಸಾಲುಗಳಲ್ಲಿ ಧರಿಸಬೇಕು.

v) ರೋವರ್ ವಿಭಾಗದ ಎಲ್ಲಾ ಪ್ರವೀಣತಾ ಪದಕಗಳೂ ಬೂದುಬಣ್ಣದ ಹಿನ್ನೆಲೆಯ ಮೇಲೆ ಕೆಂಪು ಬಣ್ಣದಲ್ಲಿರುತ್ತವೆ.

## 16. ಸೇವಾನಿರತ ರೋವರ್

25 ವರ್ಷ ಕಳೆದು, 35 ವರ್ಷ ವಯಸ್ಸಿನೊಳಗಿರುವ ರೋವರ್‌ಗಳು ಸೇವಾನಿರತ ರೋವರ್‌ಗಳೆನಿಸಿಕೊಳ್ಳುತ್ತಾರೆ.



1. ರೋವರ್ ಹಂತದಲ್ಲಿ ರೋವರ್ ಆದವನು ತಂಡದಿಂದ ಆಯ್ದ ವಿವಿಧ ಬಗೆಯ ಸೇವಾ ಯೋಜನೆಗಳಲ್ಲಿ ಭಾಗವಹಿಸುತ್ತಾನೆ. ಹೇಗಾದರಾಗಲಿ ರೋವರ್ ಹಂತವನ್ನು ಪೂರ್ಣಗೊಳಿಸಿದ ನಂತರ ಸಂಸ್ಥೆಯ ಒಳಗೆ ಅಥವಾ ಸಂಸ್ಥೆಯ ಹೊರಗೆ ಸಮುದಾಯಕ್ಕೆ ನಿಯಮಿತ ರೀತಿಯಲ್ಲಿ ಸೇವೆ ಸಲ್ಲಿಸಲು ಬದ್ಧನಾಗಿರುತ್ತಾನೆ.
2. ಗುಂಪಿನಲ್ಲಾಗಲಿ ಅಥವಾ ವೈಯುಕ್ತಿಕವಾಗಿಯಾಗಲೀ ಸೇವಾ ಯೋಜನೆಗಳನ್ನು ತೆಗೆದುಕೊಂಡಲ್ಲಿ ಅದು ನಿರಂತರವಾದುದಾಗಿರಬೇಕು ಮತ್ತು ತಂಡವು ಅದರ ದಾಖಲೆಗಳನ್ನು ಕಾದಿಡಬೇಕು.
3. 21 ವರ್ಷ ವಯಸ್ಸು ಕಳೆದ ಮೇಲೆ ರೋವರ್‌ನು ಸಂಸ್ಥೆಯಲ್ಲಿ ವಯಸ್ಕ ನಾಯಕತ್ವದ ಜವಾಬ್ದಾರಿಯನ್ನು ತೆಗೆದುಕೊಳ್ಳಲೇಬೇಕು.

## 17. ಚಾರಣ, ಕಾಲುನಡಿಗೆ ಮತ್ತು ಶಿಬಿರಗಳು

(ಸ್ಕೌಟ್ ವಿಭಾಗದ ನಿಯಮಗಳು ರೋವರ್‌ಗಳಿಗೂ ಅನ್ವಯಿಸುತ್ತವೆ)

1. ಕಾಲಾನುಕಾಲಕ್ಕೆ ಕೈಗೊಳ್ಳುವ ಚಾರಣ, ಕಾಲುನಡಿಗೆ ಮತ್ತು ಶಿಬಿರಗಳಲ್ಲಿ ಭಾಗವಹಿಸಲು ರೋವರನನ್ನು ಪ್ರೋತ್ಸಾಹಿಸಬೇಕು ಮತ್ತು ವ್ಯವಸ್ಥೆಗೊಳಿಸಬೇಕು.
2. ರೋವರ್ ಆದವನು ಚಾರಣ, ಕಾಲುನಡಿಗೆಯನ್ನು ಜಿಲ್ಲೆಯ ಒಳಗೆ ಕೈಗೊಳ್ಳಲು ಇಚ್ಛಿಸಿದಲ್ಲಿ ರೋವರ್‌ಲೀಡರ್ ಮೂಲಕ ಜಿಲ್ಲಾ ಆಯುಕ್ತರಿಂದ ಖಡ್ಡಾಯವಾಗಿ ಅನುಮತಿ ಪಡೆಯಬೇಕು.
3. ಚಾರಣ ಮತ್ತು ಕಾಲ್ನಡಿಗೆಯನ್ನು ಜಿಲ್ಲೆಗಳ ಹೊರಗೆ ಕೈಗೊಳ್ಳಲು ಪೋಷಕರಿಂದ ಅಥವಾ ಪಾಲಕರಿಂದ ಅನುಮತಿ ಪಡೆಯುವುದರ ಜೊತೆಗೆ ಸಂಬಂಧಪಟ್ಟ ಜಿಲ್ಲಾ ಸ್ಕೌಟ್ ಆಯುಕ್ತರ ಮುಖಾಂತರ ರಾಜ್ಯ ಆಯುಕ್ತ (ಸ್ಕೌಟ್ಸ್)ರಿಂದ ಅನುಮತಿ ಪಡೆಯಲೇಬೇಕು.

4. ಚಾರಣ ಅಥವಾ ಕಾಲ್ನಡಿಗೆ ವ್ಯವಸ್ಥೆಯನ್ನು ಕ್ರಮಪಡಿಸುವ ಸಲುವಾಗಿ ರೋವರ್‌ಲೀಡರ್ ತಾವೇ ಸಹಿ ಮಾಡಿದ ಅನುಮತಿ ಪತ್ರವನ್ನು ನೀಡುತ್ತಾರೆ. ಜಿಲ್ಲೆಯ ಸಂಘಟನಾ ಆಯುಕ್ತರು ದಳವನ್ನು ನೋಡಿಕೊಳ್ಳುವ ರೋವರ್‌ಲೀಡರ್‌ಗೆ ಅನುಮತಿ ಪತ್ರವನ್ನು ನೀಡುತ್ತಾರೆ. ಈ ಅನುಮತಿ ಪತ್ರವನ್ನು ರೋವರ್‌ಲೀಡರ್ ಪಟಾಲಂ ನಾಯಕರಿಗೆ ನೀಡುತ್ತಾರೆ.

5. ಪೋಷಕರಿಂದ ಅಥವಾ ಪಾಲಕರಿಂದ ಮತ್ತು ರೋವರ್ ಲೀಡರ್‌ನಿಂದ ಹಾಗೂ ಸಂಬಂಧಪಟ್ಟ ಜಿಲ್ಲಾ ಸಂಘಟನಾ ಆಯುಕ್ತರಿಂದ ಬರವಣಿಗೆಯಲ್ಲಿ ಅನುಮತಿಯನ್ನು ಪೂರ್ವಭಾವಿಯಾಗಿ ಪಡೆಯದ ಹೊರತು ರೋವರ್ ಆದವನು ಚಾರಣವನ್ನಾಗಲೀ ಅಥವಾ ಶಿಬಿರವನ್ನಾಗಲೀ ಕೈಗೊಳ್ಳಬಾರದು.

6. ಸಂಬಂಧಪಟ್ಟ ಜಿಲ್ಲಾ ಸಂಘಟನಾ ಆಯುಕ್ತರಿಂದ ಬರವಣಿಗೆಯಲ್ಲಿ ಅನುಮತಿಯನ್ನು ಪಡೆಯಲು ಸಾಕಷ್ಟು ಮಾಹಿತಿಯೊಂದಿಗೆ ನಿಗದಿತ ಅರ್ಜಿಯನ್ನು ಸಲ್ಲಿಸಿದಲ್ಲಿ ಜಿಲ್ಲಾ ಸಂಘಟನಾ ಆಯುಕ್ತರು ಬರವಣಿಗೆಯಲ್ಲಿ ಅನುಮತಿ ನೀಡಲು ಶಕ್ತರಾಗುತ್ತಾರೆ.

7. ಅನಾರೋಗ್ಯದಿಂದ ಅಥವಾ ಸಾಂಕ್ರಾಮಿಕ ರೋಗದಿಂದ ನರಳುತ್ತಿರುವ ರೋವರ್ ಯಾವುದೇ ಶಿಬಿರದಲ್ಲಿ ಭಾಗವಹಿಸಲು ಅನುಮತಿ ಇರುವುದಿಲ್ಲ.

8. ಪಟಾಲಂ ನಾಯಕನ ನಾಯಕತ್ವವಿಲ್ಲದೆ ಅಥವಾ ತರಬೇತಿ ಹೊಂದಿ ಅರ್ಹತೆ ಪಡೆದ ರೋವರ್ ಲೀಡರ್ ಇಲ್ಲದೆ ರೋವರನು ಶಿಬಿರ ಹೂಡಲು ಅನುಮತಿಸುವಂತಿಲ್ಲ.

9. ತನ್ನ ಜಿಲ್ಲೆಯ ಹೊರಗಡೆ ಶಿಬಿರವನ್ನು ನಡೆಸಲು ಉದ್ದೇಶಿಸಿದಲ್ಲಿ 14 ದಿನಗಳ ಮೊದಲು ತನ್ನ ಜಿಲ್ಲಾ ಸಂಘಟನಾ ಆಯುಕ್ತರಿಗೆ ಮಾಹಿತಿಯನ್ನು ನೀಡಬೇಕು. ಜಿಲ್ಲಾ ಸಂಘಟನಾ ಆಯುಕ್ತರು ಸರಿಯಾದ ವೇಳೆಗೆ ಎಲ್ಲಿ ಶಿಬಿರ ಹೂಡಲು ಪ್ರಸ್ತಾಪಿಸಲ್ಪಟ್ಟಿದೆಯೋ ಆ ಜಿಲ್ಲೆಯ ಜಿಲ್ಲಾ ಸಂಘಟನಾ ಆಯುಕ್ತರಿಗೆ ಮಾಹಿತಿಯನ್ನು ಕೊಟ್ಟು ಸಕಾಲದಲ್ಲಿ ಶಿಬಿರ ಹೂಡಲು ಸಹಾಯ ಮಾಡುತ್ತಾರೆ.

10. ರೋವರ್ ಆದವನು ರಾಜ್ಯದಿಂದ ಹೊರಗೆ ಶಿಬಿರ ನಡೆಸಲು ಉದ್ದೇಶಿಸಿದರೆ ಮೊದಲಿಗೆ ರಾಜ್ಯ ಸಂಸ್ಥೆಯಿಂದ ಅನುಮತಿ ಪಡೆಯಬೇಕು. ಅಂತಹ ಅರ್ಜಿಗಳನ್ನು ಸಂಬಂಧಪಟ್ಟ ಜಿಲ್ಲಾ ಸಂಘಟನಾ ಆಯುಕ್ತರು, ಸಹಾಯಕ

ರಾಜ್ಯ ಆಯುಕ್ತರು ಅಥವಾ ಸ್ಥಳೀಯ/ ಜಿಲ್ಲಾ ಸಂಸ್ಥೆ ಶಿಫಾರಸ್ಸು ಮಾಡಬೇಕು.

11. ಶಿಬಿರಕ್ಕೆ ತೆರಳುವ ರೋವರ್ ಕಡ್ಡಾಯವಾಗಿ ಸಮವಸ್ತ್ರ ಹಾಗೂ ಶಿಬಿರ ಸರಂಜಾಮು ಹಾಸಿಗೆ, ಹೊದಿಕೆಯನ್ನು ಒಳಗೊಂಡಂತೆ ಒಯ್ಯಬೇಕು. ಅವನ ಈ ತಯಾರಿಯು ರೋವರ್‌ಲೀಡರ್‌ಗೆ ಒಪ್ಪಿಗೆ ಆಗಬೇಕು.



## ಅಧ್ಯಾಯ–2

# ವಿಶೇಷ ವಿಭಾಗಗಳು

### ಅ. ವಿಸ್ತೃತ ರೋವರಿಂಗ್

1. ವಿಸ್ತೃತ ವಿಭಾಗದ ರೋವರನು ದೈಹಿಕ ಅಥವಾ ಮಾನಸಿಕ ನ್ಯೂನತೆಯುಳ್ಳವನಾಗಿರುತ್ತಾನೆ. ಉದಾ: ಕುರುಡು, ಅಂಗವಿಕಲತೆ, ಮಾನಸಿಕ ದೌರ್ಬಲ್ಯ ಇತ್ಯಾದಿ.

2. ನ್ಯೂನತೆಯುಳ್ಳ ವ್ಯಕ್ತಿಯು ರೋವರ್ ಆಗಬಹುದು. ಸ್ಕೌಟ್‌ಗೆ ಅನ್ವಯಿಸುವ ನಿಯಮವು, ಕಾಲಕಾಲಕ್ಕೆ ಅವಶ್ಯಕ ಬದಲಾವಣೆಗಳೊಂದಿಗೆ ಆ ರೀತಿಯ ಸ್ಕೌಟ್‌ಗೆ ಅನ್ವಯಿಸುವಂತೆಯೇ ವಿಸ್ತೃತ ರೋವರ್‌ಗೂ ಸಹ ಅನ್ವಯಿಸುತ್ತದೆ.

3. ಆಸ್ಪತ್ರೆ, ಸಂಘಸಂಸ್ಥೆಗಳು, ವಸತಿ ಸಮುಚ್ಚಯ ಹಾಗೂ ಶಾಲಾ/ಕಾಲೇಜುಗಳಲ್ಲಿ ವಿಸ್ತೃತ ರೋವರ್ ತಂಡ/ಸ್ಕೌಟ್ ಗುಂಪನ್ನು ಸ್ಥಾಪಿಸಬಹುದು. ವಿಸ್ತೃತ ರೋವರನು, ಸಾಮಾನ್ಯ ಸ್ಕೌಟ್ ಗುಂಪಿನಲ್ಲಿ ಸಹ ಸದಸ್ಯನಾಗಬಹುದು. ವಿಸ್ತೃತ ಸ್ಕೌಟ್/ ಗುಂಪು/ರೋವರ್ ತಂಡವು ಸ್ಥಳೀಯ ಅಥವಾ ಜಿಲ್ಲಾ ಸಂಸ್ಥೆಯ ವ್ಯಾಪ್ತಿಯಲ್ಲಿ ಕೆಲಸ ಮಾಡುತ್ತದೆ.

4. ವಿಸ್ತೃತ ರೋವರ್ ಸ್ಕೌಟ್, ಇತರ ರೋವರ್ ಸ್ಕೌಟ್‌ಗಳಿಗೆ ನಿಗದಿಪಡಿಸಿರುವ ಪರೀಕ್ಷಾಂಶಗಳಲ್ಲಿ ಉತ್ತೀರ್ಣನಾಗಬೇಕು. ಆದರೆ ಅವನ ನ್ಯೂನತೆ/ವಿಕಲತೆ/ದೌರ್ಬಲ್ಯಗಳ ಕಾರಣ, ಸಾಧ್ಯವಾಗದ ಸಂದರ್ಭಗಳಲ್ಲಿ ವಿಸ್ತೃತ ರೋವರ್‌ಗೆ ನಿಗದಿಪಡಿಸಿದ ಬದಲೀ ಪರೀಕ್ಷಾಂಶಗಳಲ್ಲಿ ಉತ್ತೀರ್ಣನಾಗಬೇಕು.

   (ವಿವರಣೆ: ಮೂಲ ಪುಸ್ತಕದಲ್ಲಿ ತಿಳಿಸಿರುವಂತೆ ಸ್ಕೌಟ್ ಪದದ ಬದಲು ರೋವರ್ ಪದವನ್ನು ಬಳಸಲಾಗಿದೆ.)

## ಆ. ಸಮುದ್ರ ಸ್ಕೌಟಿಂಗ್ ವಿಭಾಗ

### (i) ಸಮುದ್ರ ರೋವರ್

1. ಸಮುದ್ರ ರೋವರ್‌ಗಳು ಸಮುದ್ರರೋವರ್ ತಂಡವನ್ನು ರಚಿಸಿಕೊಳ್ಳುತ್ತಾರೆ.

2. ಸ್ಕೌಟ್ ಗುಂಪಿನಲ್ಲಿ ಸಮುದ್ರರೋವರ್ ತಂಡವೇ ಬೇರೆಯಾಗಿರುತ್ತದೆ.

3. ಸಾಮಾನ್ಯವಾಗಿ ಸಮುದ್ರರೋವರ್ ತಂಡವು ಸ್ಥಳೀಯ ಅಥವಾ ಜಿಲ್ಲಾ ಸಂಸ್ಥೆಯ ಭಾಗವಾಗಿ ಕೆಲಸ ಮಾಡುತ್ತದೆ.

   ಸಮುದ್ರ ಕೌಶಲದಲ್ಲಿ ವಿಶೇಷ ತರಬೇತಿ ನೀಡುವ ಸಲುವಾಗಿ ರಾಜ್ಯ ಪ್ರಧಾನ ಆಯುಕ್ತರ ಅನುಮೋದನೆ ಪಡೆದು, ಸಮುದ್ರ ಸ್ಕೌಟ್‌ಗಳು ಮತ್ತು ಸಮುದ್ರರೋವರ್ ತಂಡಗಳದೇ ಆದ ಪ್ರತ್ಯೇಕ ಸ್ಥಳೀಯ/ಜಿಲ್ಲಾ ಸಂಸ್ಥೆಯನ್ನು ರಚಿಸಬಹುದು.

4. ಸಮುದ್ರ ಸ್ಕೌಟ್ ದಳ ಅಥವಾ ರೋವರ್ ತಂಡ ಅಥವಾ ಸಮುದ್ರ ಸ್ಥಳೀಯ/ಜಿಲ್ಲಾ ಸಂಸ್ಥೆಯು ಆಯಾ ಮಟ್ಟದಲ್ಲಿ, ಸೂಕ್ತ ಅಧಿಕಾರ ಮಾರ್ಗದಲ್ಲಿ ರಾಜ್ಯ ಸಂಸ್ಥೆಗೆ ಈ ಕೆಳಕಂಡ ವಿಷಯಗಳಿಗೆ ಸಂಬಂಧಿಸಿದ ನಿಯಮಗಳನ್ನು ಶಿಫಾರಸ್ಸು ಮಾಡಬಹುದು.

   (i) ಸಮುದ್ರರೋವರ್‌ಗಳು ಉಪಯೋಗಿಸುವ ದೋಣಿ/ದೋಣಿಗಳ ತಪಾಸಣೆ.

   (ii) ದೋಣಿಯನ್ನು ಉಪಯೋಗಿಸುವ ಪ್ರದೇಶ ಮತ್ತು ವ್ಯಕ್ತಿಗಳ ಸಂಖ್ಯೆಯನ್ನು ನಿಗದಿಪಡಿಸುವುದು.

   (iii) ಏರ್‌ಟ್ಯಾಂಕ್‌ಗಳು, ಲೈಫ್‌ಬೆಲ್ಟ್‌ಗಳು ಮುಂತಾದ ಸುರಕ್ಷಾ ಸಲಕರಣೆಗಳನ್ನು ಒದಗಿಸುವುದು.

   (iv) ದೋಣಿಗಳಿಗೆ, ಸಮರ್ಥ ವ್ಯಕ್ತಿಗಳನ್ನು ನೇತೃತ್ವವಹಿಸಲು ವ್ಯವಸ್ಥೆ ಮಾಡುವುದು.

   (v) ದೋಣಿಗಳನ್ನು ಸುಸ್ಥಿತಿಯಲ್ಲಿರುವಂತೆ ಜಾಗ್ರತೆ ವಹಿಸಿ ನೋಡಿಕೊಳ್ಳುವುದು.

5. ಜಲಕೌಶಲದಲ್ಲಿ, ಅದೇ ಉದ್ದೇಶಕ್ಕಾಗಿ ಅರ್ಹತೆ ಪಡೆದಿರುವ ವ್ಯಕ್ತಿಯು ಶಿಕ್ಷಕನಾಗಬಹುದು.

6. ದೋಣಿಯು ಸುಸ್ಥಿತಿಯಲ್ಲಿರುವ ಬಗ್ಗೆ ಚಾಲ್ತಿಯಲ್ಲಿರುವ ಪ್ರಮಾಣ ಪತ್ರವು ಅವಶ್ಯಕವಾಗಿ ಇರಬೇಕು.

7. 'ಚಾರ್ಜ್ ಸರ್ಟಿಫಿಕೇಟ್' ಸಹ ಇರಲೇಬೇಕು.

### ಇ. ವಾಯು ಸ್ಕೌಟಿಂಗ್ ವಿಭಾಗ

**i) ವಾಯುರೋವರ್**

1. ವಾಯುರೋವರ್‌ಗೆ ವಾಯು ಚಟುವಟಿಕೆಗಳ ಬಗ್ಗೆ ತರಬೇತಿ ನೀಡಲಾಗುವುದು. ವಾಯುರೋವರ್‌ಗಳು ಪ್ರತ್ಯೇಕವಾಗಿ ವಾಯುರೋವರ್ ತಂಡವನ್ನು ರಚಿಸಿಕೊಳ್ಳುತ್ತಾರೆ.

2. ಸಾಮಾನ್ಯವಾಗಿ ವಾಯುರೋವರ್ ತಂಡವು ಸ್ಥಳೀಯ/ಜಿಲ್ಲಾ ಸಂಸ್ಥೆಯ ವ್ಯಾಪ್ತಿಯಲ್ಲಿ ಬರುತ್ತದೆ.

   ವಾಯುಸಂಬಂಧ ಚಟುವಟಿಕೆಗಳಲ್ಲಿ ವಿಶೇಷ ತರಬೇತಿ ನೀಡುವ ಉದ್ದೇಶದಿಂದ ರಾಜ್ಯಪ್ರಧಾನ ಆಯುಕ್ತರ ಅನುಮೋದನೆ ಪಡೆದು ವಾಯುಸ್ಕೌಟ್ ದಳಗಳು, ವಾಯುರೋವರ್ ತಂಡಗಳನ್ನೊಳಗೊಂಡ ಪ್ರತ್ಯೇಕ ಸ್ಥಳೀಯ ಜಿಲ್ಲಾ ಸಂಸ್ಥೆಗಳನ್ನು ರಚಿಸಿಕೊಳ್ಳಬಹುದು. ವಾಯುರೋವರ್ ತಂಡಗಳು, ಪ್ರಧಾನ ರಾಷ್ಟ್ರೀಯ ಆಯುಕ್ತರು ಈ ದಿಕ್ಕಿನಲ್ಲಿ ಆಗಾಗ್ಗೆ ಹೊರಡಿಸುವ ವಿಶೇಷ ನಿಯಮಗಳಂತೆ ನಡೆದುಕೊಳ್ಳ ಬೇಕು.

### ಈ. ಭಾರತ್ ಸ್ಕೌಟ್ ಗೈಡ್ಸ್‌ರವರ ವೆಂಚರ್‌ಕ್ಲಬ್ ಕಾರ್ಯಕ್ರಮ

ಪ್ರಸ್ತಾವನೆ: ಗ್ರಾಮಾಂತರ ಹಾಗೂ ನಗರ ಪ್ರದೇಶಗಳಲ್ಲಿ ಅನೇಕ ಯುವಕರು, ಯುವ ಸಂಸ್ಥೆಗಳು ಸಂಘಟಿಸುವ ಸಾಹಸ ಚಟುವಟಿಕೆಗಳಲ್ಲಿ ಭಾಗವಹಿಸಲು ಕಾತುರರಾಗಿದ್ದಾರೆ. ಸ್ಥಳೀಯ ಮಟ್ಟದಲ್ಲಿ ಸಾಹಸ ಚಟುವಟಿಕೆಗಳನ್ನು ನಡೆಸುವಂತಹ ಸಂಸ್ಥೆಗಳು ಇರುವುದಿಲ್ಲ.

ಈಗ ಪ್ರಸ್ತಾಪಿಸಿರುವ ವೆಂಚರ್‌ಕ್ಲಬ್ ಕಾರ್ಯಕ್ರಮವು ಈ ಲೋಪವನ್ನು ತುಂಬಿಕೊಡುತ್ತದಲ್ಲದೆ, ಸ್ಕೌಟ್ ವಯೋಮಿತಿಯನ್ನು ಮೀರಿ ದಳಗಳನ್ನು ಬಿಟ್ಟು

ಹೋಗುವ ಯುವ ಸದಸ್ಯರನ್ನು ಭಾರತ್ ಸ್ಕೌಟ್ ಗೈಡ್ ಸಂಸ್ಥೆಯಲ್ಲಿಯೇ ಉಳಿಸಿಕೊಳ್ಳಲೂ ಸಂಸ್ಥೆಯ ಸದಸ್ಯತ್ವವನ್ನು ಹೆಚ್ಚಿಸಿಕೊಳ್ಳಲೂ ಸಹಾಯವಾಗುತ್ತದೆ.

**ಉದ್ದೇಶ**

* ಸದಸ್ಯತ್ವ ವಿಸ್ತರಣೆ
* ಸಂಸ್ಥೆಯನ್ನು ಬಿಟ್ಟುಹೋಗುವ ಯುವಕರನ್ನು ಹೆಚ್ಚುಕಾಲ ಸಂಸ್ಥೆಯಲ್ಲಿಯೇ ಉಳಿಸಿಕೊಳ್ಳುವುದು.
* ಯುವಕರಲ್ಲಿ ನಾಯಕತ್ವ ಸಾಮರ್ಥ್ಯವನ್ನು ಅಭಿವೃದ್ಧಿಪಡಿಸುವುದು.
* ದೈಹಿಕ ಸಾಮರ್ಥ್ಯವನ್ನು ಅಭಿವೃದ್ಧಿಪಡಿಸುವುದು.
* ಪ್ರಕೃತಿಯೊಡನೆ ಸಾಮರಸ್ಯದಿಂದ ಬಾಳಲು ಉತ್ತೇಜಿಸುವುದು.
* ಅವರುಗಳ ವಿರಾಮವೇಳೆಯಲ್ಲಿ ಯುವಕರನ್ನು ರಚನಾತ್ಮಕ ಕಾರ್ಯಕ್ರಮಗಳಲ್ಲಿ ತೊಡಗಿಸುವುದು.

**ಸ್ಥಾಪನೆ**

ಗ್ರಾಮದ ಯಾವುದಾದರೊಂದು ಪ್ರದೇಶದಲ್ಲಿ, ಕನಿಷ್ಠ ಎಂಟು ಸದಸ್ಯರುಗಳನ್ನು ಸೇರಿಸಿ, ವೆಂಚರ್‌ಕ್ಲಬ್ ಸ್ಥಾಪಿಸಬಹುದು.

**ನೋಂದಣಿ**

ಪ್ರತಿ ವೆಂಚರ್ ಕ್ಲಬ್ ಅನ್ನೂ ನಿಗಧಿತ ನೋಂದಣಿ ಶುಲ್ಕವನ್ನು ಸಂದಾಯ ಮಾಡಿ, ಸ್ಥಳೀಯ/ಜಿಲ್ಲಾ ಸಂಸ್ಥೆಯ ಮೂಲಕ, ರಾಜ್ಯ ಸಂಸ್ಥೆಯಲ್ಲಿ ನೋಂದಾಯಿಸಿಕೊಳ್ಳಬೇಕು. ಸ್ಥಳೀಯ/ಜಿಲ್ಲಾ ಸಂಸ್ಥೆಯ ಶಿಫಾರಸ್ಸಿನ ಮೇಲೆ ರಾಜ್ಯಸಂಸ್ಥೆಯು ಪ್ರತಿ ಕ್ಲಬ್‌ಗೂ ಸನ್ನದನ್ನು ನೀಡುತ್ತದೆ.

**ಕ್ಲಬ್‌ನ ಕಛೇರಿ**

ಪ್ರತಿ ಕ್ಲಬ್‌ಗೂ ತನ್ನದೇ ಆದ ಕಛೇರಿ ಇರುತ್ತದೆ. ಕ್ಲಬ್‌ನ ಸದಸ್ಯರು ತಮ್ಮ ಕಛೇರಿಯಲ್ಲಿ ಕಲೆತು, ತಮ್ಮ ಯೋಜನೆಯ ಪ್ರಕಾರ ಕಾರ್ಯಕ್ರಮಗಳನ್ನೂ, ಚಟುವಟಿಕೆಗಳನ್ನೂ ಕಾರ್ಯಗತ ಮಾಡುವ ಬಗ್ಗೆ ಚರ್ಚಿಸುತ್ತಾರೆ.

## ಕಾರ್ಯವ್ಯಾಪ್ತಿ

ಪ್ರತಿ ಕ್ಲಬ್ ಸಹ ಒಂದು ನಿಗದಿತ ಪ್ರದೇಶ, ಮೊಹಲ್ಲಾ, ಗ್ರಾಮ, ಕಾರ್ಖಾನೆ, ಸಂಸ್ಥೆ ಅಥವಾ ಸಾರ್ವಜನಿಕ ಸೇವೆ ಸಲ್ಲಿಸುವ ಸರ್ಕಾರಿ ಇಲಾಖೆಗಳಲ್ಲಿ ಸ್ಥಾಪಿಸಲ್ಪಡುತ್ತದೆ.

## ಕ್ಲಬ್‌ನ ಹೆಸರು

ರಾಷ್ಟ್ರೀಯ ವೀರನಾಯಕರ ಹೆಸರಿನ ಮೇಲೆ, ಕ್ಲಬ್ ಅನ್ನು ಕರೆಯಲಾಗುತ್ತದೆ.

## ಸದಸ್ಯತ್ವ

ಭಾರತದ ಎಲ್ಲಾ ನಾಗರೀಕರಿಗೂ ಕ್ಲಬ್‌ನ ಸದಸ್ಯತ್ವವು ತೆರವಾಗಿದೆ. ಯಾವುದೇ ಜಾತಿ, ಮತ ಅಥವಾ ಧರ್ಮದವರಾದರೂ, ಯಾವುದೇ ಭೇದಭಾವವಿಲ್ಲದೆ ಸದಸ್ಯರಾಗಬಹುದು. ಆದರೆ ಅವರು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್‌ನ ಮೂಲ ತತ್ತ್ವಗಳನ್ನು ಒಪ್ಪಿಕೊಳ್ಳಲು ತಯಾರಿರಬೇಕು ಮತ್ತು ಕ್ಲಬ್‌ನ ನಿಯಮ ಪಾಲನೆಗೆ ಬದ್ಧರಾಗಿರಬೇಕು. ಒಳ್ಳೆಯ ದೇಹ ದಾರ್ಢ್ಯವುಳ್ಳವರಾಗಿರಬೇಕು ಮತ್ತು ಮಾನಸಿಕ ಸ್ವಾಸ್ಥ್ಯವಿರಬೇಕು. ಕನಿಷ್ಠ ವಿದ್ಯಾರ್ಹತೆ ಇರಬೇಕು. 18ರಿಂದ 40ರ ವಯೋಮಿತಿಯಲ್ಲಿರಬೇಕು. ಸದಸ್ಯರಾಗ ಬಯಸುವವರು, ಸ್ಕೌಟ್‌ಗಳ ಪ್ರತಿಜ್ಞೆ ನಿಯಮಗಳನ್ನು ಒಪ್ಪಬೇಕು. ಪ್ರಥಮ ಸೋಪಾನ್ (ಸ್ಕೌಟ್‌ಗಳದು) ಪರೀಕ್ಷಾಂಶ ಗಳನ್ನು ಮುಗಿಸಬೇಕು. ಆ ಬಳಿಕ ಅವರಿಗೆ ವಿಧಿವತ್ತಾಗಿ ದೀಕ್ಷೆ ವಹಿಸಲಾಗುವುದು.

## ನಾಯಕತ್ವ

ಪ್ರತಿ ಕ್ಲಬ್‌ಗೂ ಒಬ್ಬ ನಾಯಕರಿರುತ್ತಾರೆ. ಅವರ ವಯೋಮಿತಿ 25–45 ವರ್ಷಗಳು. ಅವರು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್‌ನ ರಾಷ್ಟ್ರೀಯ ಸಾಹಸಿಕ ಕಲಾಶಾಲೆ (NAI)ಯಲ್ಲಿ ಅಡ್ವೆಂಚರ್ ಲೀಡರ್ ತರಬೇತಿಯನ್ನು ಪಡೆದವರಾಗಿರುತ್ತಾರೆ.

## ರಚನೆ

ಪ್ರತಿ ಕ್ಲಬ್‌ಗೂ ಸಹ ಒಂದು ಕ್ಲಬ್ ಸಮಿತಿ ಇರುತ್ತದೆ. ಅದರಲ್ಲಿ ಒಬ್ಬ ಸಭಾಪತಿ, ಒಬ್ಬ ಉಪಸಭಾಪತಿ ಮತ್ತು ಕೋಶಾಧಿಕಾರಿಗಳಿರುತ್ತಾರೆ. ಕ್ಲಬ್‌ನ ಲೀಡರ್ ಈ ಸಮಿತಿಯ ಅಧಿಕಾರ ಪ್ರಯುಕ್ತ ಕಾರ್ಯದರ್ಶಿಗಳಾಗಿರುತ್ತಾರೆ. ಇಷ್ಟಲ್ಲದೆ ಕ್ಲಬ್‌ನ ಸದಸ್ಯರ ಪೈಕಿ 2ರಿಂದ 4 ಮಂದಿ ಚುನಾಯಿತ ಸದಸ್ಯರೂ ಇರುತ್ತಾರೆ.

**ಸಮಿತಿಯ ಕೆಲಸ ಕಾರ್ಯಗಳು, ಜವಾಬ್ದಾರಿಗಳು**

1. ಕ್ಲಬ್‌ನ ಚರ, ಸ್ಥಿರ ಆಸ್ತಿಯನ್ನು ನಿರ್ವಹಿಸುವುದು.
2. ಕ್ಲಬ್‌ನ ಕಾರ್ಯಕ್ರಮ, ಚಟುವಟಿಕೆಗಳನ್ನು ನಿರ್ಧರಿಸುವುದು.
3. ಸದಸ್ಯತ್ವವನ್ನು ಮಾನ್ಯ ಮಾಡುವುದು.
4. ಕ್ಲಬ್‌ಗಾಗಿ ನಿಧಿ ಸಂಗ್ರಹಣೆಯನ್ನು ಮಾಡುವುದು.
5. ಸಾಹಸಿಕ ಚಟುವಟಿಕೆಗಳನ್ನು ಅನುಮೋದಿಸುವುದು.

**ಹಣಕಾಸು**

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್‌ನ ಎ.ಪಿ.ಆರ್.ಓ. 1ರಲ್ಲಿ ತಿಳಿಸಿರುವ ನಿಧಿ ಸಂಗ್ರಹಣಾ ನಿಯಮಗಳಿಗೆ ಬದ್ಧರಾಗಿರಬೇಕು. ಆ ನಿಯಮಗಳನ್ವಯ ಸ್ಥಳೀಯ ಸಂಪನ್ಮೂಲಗಳ ಸಹಾಯದಿಂದ ಕ್ಲಬ್‌ನ ಹಣಕಾಸು ಪರಿಸ್ಥಿತಿಯನ್ನು ವಿಕಾಸಗೊಳಿಸಬಹುದು.

ದೇಣಿಗೆ ಮತ್ತು ಸಂಯೋಜಕರುಗಳನ್ನು ಸಮಿತಿಯು ಸ್ವೀಕರಿಸಬಹುದು.

ಕ್ಲಬ್‌ನ ಲೆಕ್ಕಪತ್ರಗಳ ವ್ಯವಹಾರ ಮತ್ತು ನಿರ್ವಹಣೆಯು ಕೋಶಾಧಿಕಾರಿಯ ಜವಾಬ್ದಾರಿ ಆಗಿರುತ್ತದೆ.

**ವೆಂಚರ್‌ಕ್ಲಬ್‌ನ ಸದಸ್ಯರ ಸಮವಸ್ತ್ರ:**

**ಟೋಪಿ:** ಭಾರತ್ ಸ್ಕೌಟ್ ಮತ್ತು ಗೈಡ್ಸ್ ಲಾಂಛನವಿರುವ, ನೀಲಿಬಣ್ಣದ ಟೋಪಿ.

**ಷರ್ಟ್:** ಬೂದು ಷರ್ಟ್ ಅಥವಾ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಮಾದರಿಯ 'ಟಿ' ಷರ್ಟ್.

**ಸ್ಕಾರ್ಫ್:** ವಿಶೇಷ ವಿನ್ಯಾಸದ ಕ್ಲಬ್‌ನ ಸ್ಕಾರ್ಫ್.

**ಟ್ರೌಜರ್ಸ್:** ಸಾಗರ ನೀಲಿ ಬಣ್ಣದ ಪ್ಯಾಂಟ್/ಜೀನ್ಸ್, ಮೊಣಕಾಲುಗಳ ಬಳಿ ಎರಡು ಕಾಲುಗಳಿಗೂ ಜೇಬುಗಳಿರಬೇಕು.

**ಹೊರಹೊಟ್ಟೆಯ ಚೀಲ (ಪೌಚ್) (Pouch):** ಕಪ್ಪುಬಣ್ಣದ ಹೊರ ಹೊಟ್ಟೆಯ ಸೊಂಟಪಟ್ಟಿಯಿರುವ ಚೀಲವನ್ನು ಸೊಂಟದ ಸುತ್ತಲೂ ಧರಿಸಬೇಕು.

ಪಾದರಕ್ಷೆ: ಕಪ್ಪು ಹಂಟರ್ಸ್ ಷೂಸ್ ಅಥವಾ ಸ್ಪೋರ್ಟ್ಸ್ ಷೂಸ್.

ಐಚ್ಛಿಕ: ಚಾಕು, ಕೈಗೊಡಲಿ, ರೂಕ್ ಸ್ಯಾಕ್, ಪ್ರಥಮ ಚಿಕಿತ್ಸಾ ಪೆಟ್ಟಿಗೆ, ನೀರಿನ ಬಾಟಲ್.

## ಕ್ಲಬ್‌ನ ಕಾರ್ಯಕ್ರಮಗಳು

- ಸ್ಥಳೀಯ ಆಟಗಳು
- ಪಂದ್ಯಗಳು
- ಕುಸ್ತಿ–ಮಲ್ಕಮ್–ಯೋಗ
- ಯುದ್ಧೋಚಿತ ಕಲೆ (Martial Arts)
- ಸಾಹಸಿಕ ಆಟಗಳು/ ವಿಶಾಲ ವ್ಯಾಪ್ತಿಯ ಆಟಗಳು/ಮುನ್ನುಗ್ಗುವ ಆಟಗಳು
- ಸಾಹಸಮಯ ಪ್ರವಾಸ
- ಶಿಲಾರೋಹಣ (Rock Climbing)
- ಸೈಕಲ್/ಮೋಟರ್ ಸೈಕಲ್ ಚಾರಣ
- ಮರುಳುಮೆಟ್ಟು ಧರಿಸಿ ಜಾರುವುದು (Skating)
- ಪರಿಸರ ಶಿಕ್ಷಣ
- ಎಕ್ಸ್‌ಪೆಡಿಷನ್‌ಗಳು ರಾತ್ರಿಯ ವೇಳೆಯ ಚಾರಣ ಪರಿಶೋದನಾ ಚಾರಣ
- ಪ್ರಕೃತಿ ವೀಕ್ಷಣಾ ಅಲೆತ
- ಶಿಬಿರ ಹೂಡುವುದು
- ಅವಲೋಕನ (Observation) ಮತ್ತು ನಿಗಮನ (Deduction)
- ಸ್ವಸಂರಕ್ಷಣೆ
- ಛಾಯಾಗ್ರಹಣ (Photography)
- ಪ್ರಕೃತಿ ಸಂಗ್ರಹಣೆ
- ಈಜುವುದು

## ಪ್ರೌಢ ಸಾಹಸ ಚಟುವಟಿಕೆಗಳು

- ಪರ್ವತಾರೋಹಣ
- ಉರುಳುಮೆಟ್ಟು ಜಾರುವಿಕೆ (ಸ್ಕೇಟಿಂಗ್)
- ನೀರ್ಗಲ್ಲಿನ ಮೇಲೆ ಜಾರುವುದು (ಐಸ್ ಸ್ಕೇಟಿಂಗ್)
- ಪ್ಯಾರಾ ಸೈಲಿಂಗ್

- ಪ್ಯಾರಾ ಗ್ಲೈಡಿಂಗ್ – ಜಲಕ್ರೀಡೆಗಳು
- ಜನಸಂಖ್ಯಾ ಶಿಕ್ಷಣ ಪದಕ – ನಕ್ಷತ್ರ ವೀಕ್ಷಣೆ
- ಅಲೆಮಾರಿ ಪದಕ

## ವೆಂಚರ್ ಕ್ಲಬ್‌ನ ದಿನನಿತ್ಯ ಕಾರ್ಯಕ್ರಮಗಳಲ್ಲಿ ಅಳವಡಿಸಿಕೊಳ್ಳಬೇಕಾದ ಸ್ಕೌಟಿಂಗ್ ಚಟುವಟಿಕೆಗಳು

* ಪ್ರಾರ್ಥನೆ
* ಪ್ರಥಮ ಚಿಕಿತ್ಸೆ
* ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್‌ನ ಮೂಲ ತತ್ತ್ವಗಳು
* ಮಾರ್ಗಕಲ್ಪನೆ
* ನಕ್ಷೆ ಓದುವುದು
* ನಕ್ಷೆ ತಯಾರಿಸುವುದು
* ದ್ವಿತೀಯ ಸೋಪಾನ್‌ವರೆಗಿನ ಮತ್ತು ರಾಜ್ಯಪುರಸ್ಕಾರ್ ಪರೀಕ್ಷಾಂಶಗಳು
* ಅಪಾಯದಲ್ಲಿರುವವರನ್ನು ರಕ್ಷಿಸುವುದು
* ಅಗ್ನಿಶಮನ
* ಕಗ್ಗಾಡು ವಾಸಿಗಳ ರೀತಿಯಲ್ಲಿ ಅಡಿಗೆ ಮಾಡುವುದು (Back Woodsman Cooking)

## ವೆಂಚರ್ ಕ್ಲಬ್ ನಾಯಕನ ಅರ್ಹತೆ

ಸಾಹಸಿಕ ನಾಯಕ ತರಬೇತಿ ಶಿಬಿರದಲ್ಲಿ ಭಾಗವಹಿಸಲು, ಈ ಕೆಳಕಂಡ ಅವಶ್ಯಕ ಅಂಶಗಳನ್ನು ಪೂರೈಸಬೇಕು.

ವಯಸ್ಸು : ಕರಾರುವಾಕ್ಕು ವಯೋಮಿತಿ 25ರಿಂದ 45 ವರ್ಷಗಳು

ವಿದ್ಯಾರ್ಹತೆ : ಕನಿಷ್ಠ ಎಸ್.ಎಸ್.ಎಲ್.ಸಿ.

ಅಪೇಕ್ಷಣೀಯ : ಇಂಗ್ಲಿಷ್ ಮತ್ತು ಹಿಂದಿ ಭಾಷೆಗಳ ಅರಿವು

ದೇಹದಾರ್ಢ್ಯತೆ : ಸಾಹಸಿಕ ಚಟುವಟಿಕೆಗಳ ಆಯಾಸವನ್ನು ಭರಿಸುವಷ್ಟು ದೇಹದಾರ್ಢ್ಯತೆ.

ತರಬೇತಿಯ ಅವಧಿ : ಸಾಹಸಿಕ ನಾಯಕರ ತರಬೇತಿ ಅವಧಿ 7 ದಿನಗಳು (4 ದಿನಗಳ ಸಾಹಸಿಕ ಚಟುವಟಿಕೆಗಳೂ ಸೇರಿದಂತೆ)

ತರಬೇತಿ ಶಿಬಿರದ ಒಕ್ಕಣೆ : ಸಾಹಸಿಕ ನಾಯಕ ತರಬೇತಿ ಶಿಬಿರದಲ್ಲಿ ಕಲಿಸುವ ವಿಷಯಗಳ ಒಕ್ಕಣೆಯನ್ನು "ಸ್ಕೀಂ ಆಫ್ ಟ್ರೈನಿಂಗ್" ಪುಸ್ತಕದಲ್ಲಿ ಕೊಡಲಾಗಿದೆ.



## ಅಧ್ಯಾಯ–3

# ರೋವರ್ ಪ್ರವೀಣತಾ ಪದಕಗಳ ಪರೀಕ್ಷಾಂಶಗಳು

ಪ್ರವೀಣತಾ ಪದಕಗಳನ್ನು ಪಡೆದವನು, ಸದಾಕಾಲ, ಆಗಾಗ ಮಾಡುವ ಬದಲಾವಣೆಗಳಿಗನುಗುಣವಾಗಿ ಸಂಬಂಧಿಸಿದ ತಿಳುವಳಿಕೆಯನ್ನು ಪಡೆಯುತ್ತಿರಬೇಕು. ಸೂಕ್ತ ಅಧಿಕಾರಿಕ ವ್ಯಕ್ತಿಗಳು, ಹಾಗಿಲ್ಲದಿರುವುದನ್ನು ಕಂಡಲ್ಲಿ ಪದಕವನ್ನು ಹಿಂಪಡೆಯಬಹುದು. ರೋವರ್ ಪ್ರವೀಣತಾ ಪದಕಗಳನ್ನು ಬೇರೆ ರೀತಿ ಹೇಳದಿದ್ದಲ್ಲಿ ಸಮವಸ್ತ್ರದ ಷರ್ಟ್‌ನ ಬಲತೋಳಿನ ಮೇಲೆ ಧರಿಸಬೇಕು.

**1. ಏಡ್ಸ್ ಜಾಗೃತಿ (Aids Awareness)**




i) ಹೆಚ್ಐವಿ ಹೇಗೆ ಹರಡುತ್ತದೆ ಮತ್ತು ಅದನ್ನು ತಡೆಗಟ್ಟುವುದು ಹೇಗೆ? ತಿಳಿದಿರಬೇಕು ಮತ್ತು ಆ ವಿಧದ ರೀತಿಗಳನ್ನು ಅರ್ಥಮಾಡಿಕೊಂಡಿರಬೇಕು.

ii) ರೋಗದ ಸಹಜವಾದ ಚರಿತ್ರೆ ತಿಳಿದಿರಬೇಕು.

iii) ರೋಗವು ಹರಡುವುದನ್ನು ತಡೆಗಟ್ಟಲು ಆರೋಗ್ಯ ಇಲಾಖೆಯವರು ಕೈಗೊಂಡಿರುವ ಕ್ರಮಗಳನ್ನು ತಿಳಿದಿರಬೇಕು.

iv) ಈ ಕೆಳಗಿನವುಗಳಲ್ಲಿ ಯಾವುದೇ ಸಾರ್ವಜನಿಕ ಜಾಗೃತಿ ಕಾರ್ಯಕ್ರಮ ಯೋಜನೆಯನ್ನು ತಯಾರಿಸಬೇಕು.

ಅ. ರೋಗದ ಸೋಂಕಿನಿಂದ ಆಗುವ ಅಪಾಯ

ಆ. ಹರಡುವ ರೀತಿಗಳು

ಇ. ಹೆಚ್ಐವಿ ಸೋಂಕು ಮತ್ತು ಏಡ್ಸ್ ಬಗ್ಗೆ ತಪ್ಪು ಮಾಹಿತಿ ಮತ್ತು ಗ್ರಹಿಕೆಗಳ ನಿವಾರಣೆ

ಈ. ವೈಯಕ್ತಿಕ ಹಾಗೂ ಸಾಮುದಾಯಿಕವಾಗಿ ರೋಗವನ್ನು ತಡೆಗಟ್ಟುವ ವಿಧಾನಗಳು

ಉ. ಮೇಳ/ಬೀದಿನಾಟಕ / ರಸಪ್ರಶ್ನೆ (ಕ್ವಿಜ಼್) ಸ್ಪರ್ಧೆಯನ್ನು ತಂಡವು ಏರ್ಪಡಿಸಿ ಆ ಮೂಲಕ ಜನರಲ್ಲಿ ಜಾಗೃತಿ ಉಂಟುಮಾಡುವಂತಿರಬೇಕು.

**2. ವಾಯು ಶಿಲ್ಪಕಾರ (Air Mechanic)**



1. ಕಡ್ಡಾಯವಾದ ವಿವಿಧ ದಾಖಲೆಗಳ ಬಗ್ಗೆ ತಿಳಿದಿರಬೇಕು. ಉದಾ: ನೋಂದಣಿ ಪ್ರಮಾಣ ಪತ್ರ; ಹಾರಾಟ ಯೋಗ್ಯ ಪ್ರಮಾಣ ಪತ್ರ; ಹಾರಾಟ ಸಂಹಿತೆ; ರಫ್ತು ಸರಕಿನ (ಒಯ್ಯಲು) ಹಾರಾಟ ಯೋಗ್ಯತೆಯ ಪ್ರಮಾಣಪತ್ರ ಇತ್ಯಾದಿ.
2. ವಿಮಾನದಲ್ಲಿ ಅನುಮೋದಿತ ವಸ್ತುವನ್ನು ಗುರುತಿಸುವ ವಿಧಾನ ತಿಳಿದಿರಬೇಕು.
3. ವಿಮಾನವನ್ನು ಜಾಕ್ ಮಾಡುವ (ಜಾಕಿಂಗ್); ಲೆವೆಲ್ ಮಾಡುವ (ಲೆವೆಲ್ಲಿಂಗ್) ಮತ್ತು ಮೂರ್ ಮಾಡುವ (ಮೂರಿಂಗ್) ಬಗ್ಗೆ ಸಾಮಾನ್ಯ ತಿಳುವಳಿಕೆ ಇರಬೇಕು.
4. ವಿಮಾನವನ್ನು ದುರಸ್ತಿಯಲ್ಲಿಡಲು ಮತ್ತು ನಿರ್ವಹಿಸಲು ಉಪಯೋಗಿಸುವ ಸಾಧನ, ಸಲಕರಣೆಗಳ ಬಗ್ಗೆ ತಿಳಿದಿರಬೇಕು.
5. ವಿಮಾನಗಳನ್ನು ದುರಸ್ತಿಯಲ್ಲಿಡುವಾಗ, ಇಂಧನವನ್ನು ತುಂಬುವಾಗ, ಇಂಧನವನ್ನು ಖಾಲಿ ಮಾಡುವಾಗ ಗಮನಿಸಬೇಕಾದ ಸಂರಕ್ಷಣೆ ಮತ್ತು ಎಚ್ಚರಿಕೆ ಕ್ರಮಗಳನ್ನು ತಿಳಿದಿರಬೇಕು.
6. ದ್ರವವಾಹಕ ಪೈಪ್‌ಲೈನ್‌ಗಳನ್ನು ಹೇಳುವ ವರ್ಣ ಸಂಕೇತಗಳು; ಗುರುತುಗಳು ಅಥವಾ ಇತರ ಚಿಹ್ನೆಗಳು, ರಬ್ಬರ್ ಭಾಗಗಳು ಮತ್ತಿತರ ವಿಮಾನದ ರಚನೆಯ ಬಗ್ಗೆ ತಿಳಿದಿರಬೇಕು.
7. ವಿವಿಧ ವಿಮಾನ ಸಂಹಿತೆಗಳು; ಎ.ಟಿ.ಎ. ವಿಧಾನದ ವರ್ಗೀಕರಣ; ಪರಿವೀಕ್ಷಣ ತಪ್ಸೀಲು; ಕಾಲ ಪರಿಮಿತಿ ಇವುಗಳ ಬಗ್ಗೆ ತಿಳಿದಿರಬೇಕು.

8. ಅವಶ್ಯಕ ವಸ್ತುಗಳು; ಬಿಡಿಭಾಗಗಳು ಮತ್ತು ಕೈಸಲಕರಣೆಗಳ ಉಪಯೋಗ; ಸರಳ ಯಂತ್ರ ಸಲಕರಣೆಗಳು ಮತ್ತು ಕರಾರುವಕ್ಕಾಗಿ ಅಳತೆ ಮಾಡುವ ಉಪಕರಣಗಳು ಇವುಗಳನ್ನು ತಿಳಿದಿರಬೇಕು.

9. ಪಿಸ್ಟನ್ ಎಂಜಿನ್; ಜೆಟ್ ಎಂಜಿನ್; ಟರ್ಬೈನ್ ಎಂಜಿನ್ ಮತ್ತು ಪ್ರೊಪೆಲರ್‌ಗಳ ಬಗ್ಗೆ ತಿಳಿದಿರಬೇಕು.

**3. ವಿಮಾನ ಗುರುತಿಸುವವ (Air Spotter)**




1. ನಮ್ಮ ದೇಶದಲ್ಲಿ ಸೇವೆಯಲ್ಲಿರುವ 6 ಸೈನಿಕ ಮತ್ತು 6 ಖಾಸಗಿ ವಿಮಾನಗಳ ಛಾಯಾ ರೂಪಕಗಳನ್ನು (Silhouttes) ಪ್ರದರ್ಶಿಸಿದಾಗ 20 ಸೆಕೆಂಡುಗಳ ಅವಧಿಯಲ್ಲಿ ಗುರುತಿಸಬೇಕು.

2. ಗುರುತಿಸಲು ಹಾಗೂ ಅಭ್ಯಸಿಸುವ ಸಲುವಾಗಿ ಮೂರು ವಿಮಾನ ಮಾದರಿಗಳನ್ನು ತಯಾರಿಸಬೇಕು (ಕಿಟ್ ಬಳಸಬಹುದು). ಈ ಮಾದರಿಗಳು ಹಾರಬೇಕಾಗಿಲ್ಲ.

3. ಭಾರತದ ಹಾಗೂ ಎರಡು ವಿದೇಶಗಳ ಸೇವೆಯ ಮತ್ತು ಖಾಸಗಿಯ ವಿಮಾನಗಳ ರಾಷ್ಟ್ರೀಯ ಗುರುತುಗಳನ್ನು ತಿಳಿದಿರಬೇಕು.

4. ಮೂರು ತಿಂಗಳ ಕಾಲ ಆದಷ್ಟೂ ವಿಮಾನಗಳನ್ನು ಗಮನಿಸಿ ಸಾಧ್ಯವಿದ್ದಲ್ಲಿ ಈ ಕೆಳಗಿನ ಅಂಶಗಳನ್ನು ದಾಖಲಿಸಬೇಕು.

   - ನೋಡಿದ ದಿನಾಂಕ, ಕಾಲ, ಸ್ಥಳ
   - ಹಾರುತ್ತಿದ್ದ ದಿಕ್ಕು
   - ಸೇವೆಯದೇ / ಖಾಸಗಿಯದೇ?
   - ವಾಯುಗುಣದ ಸ್ಥಿತಿ
   - ಯಾವ ದೇಶದ್ದು

   **ಅಥವಾ** ಹಾರುತ್ತಿರುವ. ವಿಮಾನವನ್ನು ಗುರುತಿಸುವ ಕೌಶಲ ಪ್ರದರ್ಶಿಸಬೇಕು.

5. ಭಾರತ ವಾಯು ದಳದವರು ಉಪಯೋಗಿಸುವ ಇತ್ತೀಚಿನ ಯುದ್ಧ ವಿಮಾನಗಳ ಬಗ್ಗೆ ತಿಳಿದಿರಬೇಕು ಮತ್ತು ಅವುಗಳಲ್ಲೊಂದು ವಿಮಾನವನ್ನು ವಿವರಿಸಬೇಕು.

### 4. ವೈಮಾನಿಕ (Airman)



1. ವಾಯು ಸಂಚಾರ ನಿಯಮಗಳನ್ನು ತಿಳಿದಿರಬೇಕು ಮತ್ತು ಪ್ರದರ್ಶಿಸಬೇಕು.
2. ಬಾನುಲಿ ಕರೆ ಚಿಹ್ನೆಗಳನ್ನು ಬಳಸಲು ತಿಳಿದಿರಬೇಕು.
3. ರಾಡಾರ್ ಸಂಕೇತಗಳ ಅಳತೆಗಳು ಮತ್ತು ಮಾಹಿತಿ ಓದುವುದನ್ನು ತಿಳಿದಿರಬೇಕು.
4. ವಿಮಾನದ ಚಾಲಕರ ಕಾಕ್‌ಪಿಟ್‌ನ ಕಂಟ್ರೋಲ್ ಪ್ಯಾನಲ್ ಸ್ವಿಚ್‌ಗಳನ್ನು ಉಪಯೋಗಿಸುವ, ಇತರ ಮಾಪನ ಸಾಧನಗಳನ್ನು ನಡೆಸುವುದನ್ನು ತಿಳಿದಿರಬೇಕು.
5. ವಿಮಾನ ಪಟ್ಟಿಯಿಂದ (ಏರ್‌ಸ್ಟ್ರಿಪ್) ವಿಮಾನವನ್ನು ಮೇಲೆ ಹಾರಿಸುವುದು ಮತ್ತು ಕೆಳಗಿಳಿಸುವುದನ್ನು ತಿಳಿದಿರಬೇಕು.

### 5. ಓಟಗಾರ (Athlet)



1. ಕೂಡುವ, ನಿಲ್ಲುವ, ನಡೆಯುವ, ಓಡುವ ಮತ್ತು ಓಟ ಸ್ಪರ್ಧೆಯನ್ನು ಪ್ರಾರಂಭಿಸುವ ಸರಿಯಾದ ವಿಧಾನ (ಭಂಗಿ)ಗಳನ್ನು ಪ್ರದರ್ಶಿಸಬೇಕು.
2. ದೈಹಿಕ ವ್ಯಾಯಾಮಗಳನ್ನು ಹೊರಾಂಗಣದಲ್ಲಿ ಕ್ರಮಬದ್ಧವಾಗಿ, ಉಚಿತ ರೀತಿಯ ಶಿಕ್ಷಣ ಪಡೆದಿರುವ ಮತ್ತು ಅನುಸರಿಸುತ್ತಿರುವ ಬಗ್ಗೆ ರುಜುವಾತುಪಡಿಸಬೇಕು.

   2ನೇ ದರ್ಜೆ: 6 ಅಂಕಗಳು; ಮೊದಲ ದರ್ಜೆ: 8 ಅಂಕಗಳು; ವಿಶೇಷ ದರ್ಜೆ: 10 ಅಂಕಗಳು

   i) 100 ಮೀಟರ್ ಓಟ : 14 ಸೆಕೆಂಡ್; 13 ಸೆಕೆಂಡ್; 12 ಸೆಕೆಂಡ್
   ii) 800 ಮೀಟರ್ ಓಟ: 2 ನಿಮಿಷ 46 ಸೆಕೆಂಡ್‌ಗಳು; 2 ನಿಮಿಷ 23 ಸೆಕೆಂಡ್; 2 ನಿಮಿಷ 12 ಸೆಕೆಂಡ್
   iii) ಓಟದಲ್ಲಿ ಎತ್ತರಕ್ಕೆ ಹಾರುವುದು: 1.08 ಮೀ; 1.16 ಮೀ; 1.25 ಮೀ.
   iv) ಓಟದಲ್ಲಿ ದೂರ ಹಾರುವುದು: 3 ಮೀ; 4 ಮೀ; 5 ಮೀ.

v) ಕ್ರಿಕೆಟ್ ಚೆಂಡನ್ನು ಎಸೆಯುವುದು: 46.5 ಮೀ; 51 ಮೀ; 66 ಮೀ. ಅಥವಾ
ಷಾಟ್ ಪುಟ್ (8.11 ಪೌಂಡ್) 8.10 ಮೀ; 9.62 ಮೀ; 10.53 ಮೀ.

vi) ದಂಡ ಮತ್ತು ಬೈಠಕ್‌ಗಳು : 25 ದಂಡಗಳು (86 ಸೆಕೆಂಡ್‌ಗಳು); 50 ದಂಡಗಳು (1 ನಿ. 10 ಸೆಕೆಂಡ್‌ಗಳು); 80 ದಂಡಗಳು (2 ನಿ.) ಸ್ಕ್ವಾಟ್ ಥ್ರಸ್ಟ್ (25 ಸೆಕೆಂಡ್‌ಗಳು)

**6. ವಿಮಾನ ಚಾಲಕ (Airiator)**

1. (i) ವಿಮಾನ ನಿಲ್ದಾಣದಲ್ಲಿರುವಾಗ ಅಥವಾ ವಿಮಾನದ ಬಳಿ ಇರುವಾಗ ಹೊಂದಿಕೊಳ್ಳುವ ಸೂಕ್ತ ನಡವಳಿಕೆ ಮತ್ತು ಸಾಮಾನ್ಯ ಎಚ್ಚರಿಕೆ ಕ್ರಮಗಳನ್ನು ತಿಳಿದಿರಬೇಕು.



ಹಗಲು ಮತ್ತು ರಾತ್ರಿಯ ವೇಳೆ ವಿಮಾನವು ಇಳಿಯುವ ಸಲುವಾಗಿ, ಗಾಳಿಬೀಸುವ ದಿಕ್ಕನ್ನು ತಿಳಿಸಬೇಕು ಮತ್ತು ವಿಮಾನವನ್ನು ನಿಲ್ಲಿಸುವ (Taxing)ಮತ್ತು ಎಳೆದೊಯ್ಯುವ (Towing) ಬಗ್ಗೆ ಸಹಾಯ ಮಾಡಬೇಕು.

(ii) ಬೆಣೆಗಳನ್ನು (Chocks) ಉಪಯೋಗಿಸಲು ಮತ್ತು ಸುಧಾರಿಸಲು (Improve) ತಿಳಿದಿರಬೇಕು. ಚಾಲನೆಯಲ್ಲಿರಲಿ ಅಥವಾ ನಿಲ್ಲಿಸಿರಲಿ ಜನರನ್ನು ವಿಮಾನದಿಂದ ದೂರದಲ್ಲಿರುವಂತೆ ಮಾಡುವುದರ ಪ್ರಾಮುಖ್ಯತೆಯನ್ನು ತಿಳಿದಿರಬೇಕು. ಮತ್ತು ನಾಶವಾದ ವಿಮಾನ ಅದರ ಭಾಗಗಳನ್ನು, ಪೊಲೀಸ್ ಅಥವಾ ಅಧಿಕಾರಿಗಳು ಬರುವವರೆಗೆ ಕೆಡಿಸದಂತೆ ಕಾಪಾಡುವುದರ ಅವಶ್ಯಕತೆಯನ್ನು ತಿಳಿದಿರಬೇಕು.

(iii) ವಿಮಾನವು ಇಳಿಯುವ ಸ್ಥಳವು /ಭೂಭಾಗವು ಸಾಕಷ್ಟು ಸರಿ ಇರುವ ಬಗ್ಗೆ ಕಾಣಿಸಬೇಕು; ನೆರೆಹೊರೆಯಲ್ಲಿ ಅಂತಹ ಮೂರು ಪ್ರದೇಶಗಳನ್ನು ಹೆಸರಿಸಬೇಕು. ಕೇಂದ್ರ ಸ್ಥಾನದಿಂದ 80 ಕಿ.ಮೀ. ಸುತ್ತಿನಲ್ಲಿ ಬರುವ ಪ್ರಮುಖ ವಿಮಾನ ನಿಲ್ದಾಣಗಳಿರುವ ದಿಕ್ಸೂಚಿಯ ದಿಕ್ಕುಗಳನ್ನು ತಿಳಿದಿರಬೇಕು.

2. ಹಾರಾಟದ ಕಲ್ಪನಾಶಾಸ್ತ್ರ ಮತ್ತು ವಿಮಾನ ನಿರ್ಲ್ದಾಣಗಳ ಬಗ್ಗೆ ತಿಳಿದಿರಬೇಕು; ಮಾದರಿ ವಿಮಾನವನ್ನು (ಕಿಟ್ ಉಪಯೋಗಿಸಬಹುದು) ತಯಾರಿಸಬೇಕು. ಅದಕ್ಕೆ ಈ ಕೆಳಕಂಡ ಕನಿಷ್ಠ ಹಾರಾಟ ಲಕ್ಷಣಗಳಿರಬೇಕು.

ಗ್ಲೈಡರ್: i) ಕೈನಲ್ಲಿ ಪಥಕ್ರಮಣ ಮಾಡಿದ್ದು (Hand Launch) – 60 ಸೆಕೆಂಡ್‌ಗಳು

ii) ಎಳೆತದಲ್ಲಿ ಪಥಕ್ರಮಣ (Towlaunch) – 45 ಸೆಕೆಂಡ್‌ಗಳು ರಜ್ಜು (ಎಳೆತದ ಹಗ್ಗ) 60 ಮೀ. ಉದ್ದ ಇರಬೇಕು.

ವಿಮಾನ: i) ರಬ್ಬರ್ ಶಕ್ತಿಚಾಲಿತ: 30 ಸೆಕೆಂಡ್‌ಗಳು

ii) ಯಂತ್ರಚಾಲಿತ (ಹತೋಟಿ ರಜ್ಜು ಸೇರಿ) – 45 ಸೆಕೆಂಡ್‌ಗಳು [ಗರಿಷ್ಠ 15 ಸೆಕೆಂಡ್‌ಗಳ ಕಾಲ, ಯಂತ್ರ ಓಡಬಹುದು]

iii) ಅವನ ಮಾದರಿ ವಿಮಾನವು ಅ) ಸುಸೂತ್ರವಾಗಿ ಮೇಲೇರಬೇಕು; ಆ) ಸುಮಾರು 2 ಮೀಟರ್ ಎತ್ತರದಲ್ಲಿ 3 ಲ್ಯಾಪ್ ಹಾರಾಡಬೇಕು ಮತ್ತು ಇ) ಇದ್ದಕ್ಕಿದ್ದಂತೆ ಏರಬೇಕು ಮತ್ತು ಡೈವ್ ಮಾಡಬೇಕು ಹಾಗೂ ಸುಸೂತ್ರವಾಗಿ ಕೆಳಗಿಳಿಯಬೇಕು.

**7. ರಕ್ತದಾನಿ (Blood Donor)**



1. ಮಾನವ ದೇಹದಲ್ಲಿ ರಕ್ತದ ಕಾರ್ಯ ನಿರ್ವಹಣೆ, ರಚನೆ ಹಾಗೂ ದೇಹದಲ್ಲಿ ಒಟ್ಟು ರಕ್ತದ ಪ್ರಮಾಣ ವನ್ನು ತಿಳಿದಿರಬೇಕು.
2. ರಕ್ತದಾನ ಮಾಡುವ ವ್ಯಕ್ತಿಯ ರಕ್ತದ ಹೊಂದಾಣಿಕೆ ತಿಳಿದಿರಬೇಕು.
3. ತನ್ನ ರಕ್ತವನ್ನು ದಾನ ಮಾಡಬೇಕು.
4. ರಕ್ತದಾನ ಮಾಡುವುದರಿಂದ ತೊಂದರೆಯಾಗದೇ ಇರುವ ಬಗ್ಗೆ ಕನಿಷ್ಠ 25 ಜನರಿಗೆ ಮನವರಿಕೆ ಮಾಡಿಕೊಡಬೇಕು.
5. ಕನಿಷ್ಠ 5 ದಾನಿಗಳನ್ನು ಗುರುತಿಸಬೇಕು ಹಾಗೂ ಅವರು ರಕ್ತದಾನ ಮಾಡಲು ಸಹಾಯ ಮಾಡಬೇಕು.

6. ರಕ್ತ ಸಂಗ್ರಹಿಸುವ ಸ್ಥಳೀಯ ವೈದ್ಯರ ಪ್ರಯತ್ನಕ್ಕೆ ನೀವು ಸಹಾಯ ನೀಡಬೇಕು.

7. ರಕ್ತದಾನದ ಬಗ್ಗೆ ಭಿತ್ತಿಪತ್ರಗಳನ್ನು ತಯಾರಿಸಬೇಕು ಮತ್ತು ಅವುಗಳನ್ನು ಪ್ರಮುಖ ಸ್ಥಳಗಳಲ್ಲಿ ಪ್ರದರ್ಶಿಸಬೇಕು.

**8. ಕುಸ್ತಿಪಟು (Boxer)**



1. ಸುರಕ್ಷತಾ ಸಲಕರಣೆಗಳಾದ ಶಿರಸ್ತ್ರಾಣ (Headgear), ದಂತರಕ್ಷಕ (Tooth guard), ಕೈಚೀಲ (Hand gloves) ಇವುಗಳ ಬಗ್ಗೆ ತಿಳಿದಿರಬೇಕು.

2. ಸದಾಕಾಲ ದೇಹದಲ್ಲಿ ಸಾಕಷ್ಟು ನೀರಿನ ಅಂಶ ವಿರುವಂತಿರಬೇಕು.

3. ದೇಹದಾರ್ಢ್ಯವುಳ್ಳವನಾಗಿರಬೇಕು.

4. ಅಂಗ ಸಾಧನಾಲಯಕ್ಕೆ ಹೋಗಿ, ಭಾರವನ್ನೆತ್ತುವುದನ್ನು ಅಭಿವೃದ್ಧಿಪಡಿಸಿಕೊಳ್ಳಬೇಕು. ಶಕ್ತಿಯುತವಾದ ಮುಷ್ಠಿ ಇರುವಂತೆ ಅಭ್ಯಾಸ ಮಾಡಿಕೊಳ್ಳಬೇಕು.

5. ತರಬೇತಿ ಹೊಂದಿದ ಕುಸ್ತಿಪಟು/ಬೋಧಕನಿಂದ 6 ತಿಂಗಳ ಕಾಲ ತರಬೇತಿ ಶಿಬಿರದಲ್ಲಿ ತರಬೇತಿ ಪಡೆದು ವರದಿಯನ್ನೊಪ್ಪಿಸಬೇಕು.

6. ಬ್ಲಾಕ್ ಮಟ್ಟ, ಜಿಲ್ಲಾ ಮಟ್ಟ ಮತ್ತು ರಾಜ್ಯ ಮಟ್ಟದಲ್ಲಿ ಅಥವಾ ತೆರೆದ ಆಹ್ವಾನದ ಮೂಲಕ ಕುಸ್ತಿ ಸ್ಪರ್ಧೆಯಲ್ಲಿ ಭಾಗವಹಿಸಬೇಕು ಮತ್ತು ಪದಕ ಸಮಿತಿ/ ಪದಕ ಪರೀಕ್ಷಕರಿಗೆ ವರದಿ ಸಲ್ಲಿಸಬೇಕು.

**9. ಸೆಲ್‌ಫೋನ್ ಶಿಲ್ಪಕಾರ (Cell Phone Mechanic)**



1. ಸೆಲ್‌ಫೋನ್‌ನ ಚರಿತ್ರೆ ತಿಳಿದಿರಬೇಕು.

2. ಫೋನ್‌ಗಳ ಬಳಕೆಯ (Application) ಆಧಾರದ ಮೇಲೆ ಅವುಗಳನ್ನು ವರ್ಗೀಕರಿಸಬೇಕು.

3. ವ್ಯವಹಾರ ಪದ್ಧತಿ (Operating System)ಗನುಗುಣವಾಗಿ ಅವುಗಳನ್ನು ವರ್ಗೀಕರಿಸಬೇಕು.

4. GSM, CDMA, LTE, VOLTE ಇವುಗಳಲ್ಲಿರುವ ವ್ಯತ್ಯಾಸವನ್ನು ಹೇಳುವಂತಿರಬೇಕು.

5. ಫೋನ್‌ನ ವಿವಿಧ ದೋಷಗಳನ್ನು ಸರಿಪಡಿಸಲು (debug) ತಿಳಿದಿರಬೇಕು.

6. ಫೋನ್‌ನಲ್ಲಿ ಒಂದು ಬಳಕೆಯ ರೀತಿಯನ್ನು ಸ್ಥಾಪಿಸಲು (Install) ಬರಬೇಕು.

7. ಮೊಬೈಲ್ ಜಾಲತಾಣದಲ್ಲಿ ವ್ಯವಹರಿಸುವ ಬಗ್ಗೆ ತೀಕ್ಷ್ಣವಾದ (Keen) ತಿಳುವಳಿಕೆ ಇರಬೇಕು.

8. ನಿಗದಿತ ಸೆಲ್‌ಫೋನ್‌ನ ವಿವಿಧ ಭಾಗಗಳನ್ನು ಹೇಳುವಂತಿರಬೇಕು.

9. ಸ್ಮಾರ್ಟ್ ಫೋನ್‌ನಲ್ಲಿ ಸಂಚರಿಸಲು (Navigate) ಬರಬೇಕು.

10. ಅತಿ ಸಾಮಾನ್ಯವಾಗಿ ಮೊಬೈಲ್‌ನಲ್ಲಿರುವ ಬಳಕೆಯ ರೀತಿಗಳನ್ನೂ (ಫೇಸ್‌ಬುಕ್; ವಾಟ್ಸಾಪ್; ಟ್ವಿಟ್ಟರ್, ಮೇಲ್ ಇತ್ಯಾದಿ) ಅವುಗಳ ಉಪಯೋಗಗಳನ್ನೂ ತಿಳಿದಿದ್ದು ಪಟ್ಟಿ ಮಾಡಬೇಕು.

11. ಮೊಬೈಲ್ ಫೋನ್‌ಗಳನ್ನು ದುರಸ್ತಿ ಮಾಡುವ ಬಗ್ಗೆ ಕನಿಷ್ಠ 3 ತಿಂಗಳ ಕಾಲ ತರಬೇತಿ ಪಡೆಯಬೇಕು.

**10. ನಾಗರಿಕ ರಕ್ಷಣೆ (Civil Defence)**




1. ತನ್ನ ಮೊಹಲ್ಲಾದಲ್ಲಿರುವ ಮನೆಯಿಂದ 1 ಕಿ.ಮೀ. ಸುತ್ತಳತೆಯೊಳಗೆ ಬರುವ ಪೌರ ರಕ್ಷಕ ಸಂಸ್ಥೆಯ ಬಗ್ಗೆ ಮಾಹಿತಿಯನ್ನು ತಿಳಿದಿರಬೇಕು.

   ರೋವರ್ ಪ್ರವೀಣತಾ ಪದಕಗಳ ಪರೀಕ್ಷಾಂಶಗಳು
   ಆ ಪ್ರದೇಶದಲ್ಲಿರುವ ಶಾಲೆ ಅಥವಾ ಕಾರ್ಯ ನಿರ್ವಹಣೆಯ ಸ್ಥಳ, ಉದಾಹರಣೆಗೆ ಪಾಲಕರ ಹೆಸರು, ಅವರು ಕಾರ್ಯನಿರ್ವಹಿಸುವ ಸ್ಥಳ, ಪ್ರಥಮ ಚಿಕಿತ್ಸಾ ಘಟಕ, ಆಸ್ಪತ್ರೆ, ತಿಳಿಯುವಂತೆ ಬಿಡಿ. ಎ.ಆರ್.ಪಿ. ಸೇವೆ, ಮತ್ತಿತರ ದೊರೆಯಬಹುದಾದ ಸೌಲಭ್ಯಗಳ ಬಗ್ಗೆ ತಿಳಿದಿರಬೇಕು.

2. ತುರ್ತು ಸಂದರ್ಭದಲ್ಲಿ ವರದಿಯ ಅರ್ಜಿಯನ್ನು ಸರಿಯಾಗಿ ತುಂಬಿಸುವ ಹಾಗೂ ಸಂಬಂಧಪಟ್ಟ ಪಾಲಕರಿಗೆ (ವಾರ್ಡನ್) ಲಿಖಿತ ವರದಿಯನ್ನು ಸಲ್ಲಿಸುವ ಬಗ್ಗೆ ತಿಳಿದಿರಬೇಕು.

3. ವಿಮಾನ ಧಾಳಿ ಅಥವಾ ಅದೇ ರೀತಿಯ ಇತರೆ ತುರ್ತುಸಮಯಗಳಲ್ಲಿ ಅಪಘಾತಕ್ಕೀಡಾದವರನ್ನು ರಕ್ಷಿಸುವ ಮತ್ತು ಪ್ರಥಮಚಿಕಿತ್ಸೆ ನೀಡುವ ವಿಧಾನಗಳನ್ನು ತಿಳಿದಿರಬೇಕು.

4. ಅಗ್ನಿ ದುರಂತಗಳನ್ನು ಎದುರಿಸುವ ವಿಧಾನಗಳನ್ನು ತಿಳಿದಿರಬೇಕು.

5. ಕೆಳಕಂಡ ಯಾವುದಾದರೊಂದು ರಕ್ಷಕ ಸೇವೆಯಲ್ಲಿ ತರಬೇತಿಯನ್ನು ಪಡೆದ ಬಗ್ಗೆ ಮತ್ತು ತನ್ನ ಮೊಹಲ್ಲಾ ಅಥವಾ ಪ್ರದೇಶದಲ್ಲಿ ಸೇವೆ ಸಲ್ಲಿಸಲು ಪೌರಸಂರಕ್ಷಣಾ ಸಂಸ್ಥೆಯಲ್ಲಿ ನೋಂದಾಯಿಸಿಕೊಂಡಿರುವ ಬಗ್ಗೆ ಪ್ರಮಾಣ ಪತ್ರವನ್ನು ಸಾದರಪಡಿಸಬೇಕು.

   a) ಅಗ್ನಿಶಾಮಕ ಪಡೆ
   b) ಪ್ರಥಮ ಚಿಕಿತ್ಸಾ ತಂಡ
   c) ರಕ್ಷಣಾ ತಂಡ
   d) ಹರಿಕಾರ (Messenger) ಸೇವೆ
   e) ದೂರವಾಣಿ ಸಂಪರ್ಕ

6. ಸ್ಕೌಟ್‌ಗಳಿಗಿರುವ, ಮಾರ್ಗದರ್ಶಿ (Path Finder) ಪ್ರವೀಣತಾ ಪದಕದಲ್ಲಿ ಉತ್ತೀರ್ಣನಾಗಬೇಕು.

7. ಸ್ಕೌಟ್‌ಗಳಿಗಿರುವ ಕೆಳಗಿನ ಪದಕಗಳಲ್ಲಿ ಒಂದರಲ್ಲಿ ಉತ್ತೀರ್ಣನಾಗಬೇಕು.

   a) ಆಸ್ಪತ್ರೆ ಮೇಲ್ವಿಚಾರಕ (Hospital Man)
   b) ಚರ ಚಿಕಿತ್ಸಕ (Ambulance Man)
   c) ಅಗ್ನಿಶಾಮಕ (Fireman)

**ಸೂಚನೆ:** ಮೇಲ್ಕಂಡ 6 ಮತ್ತು 7ರಲ್ಲಿ ತಿಳಿಯಪಡಿಸಿರುವ ಪ್ರವೀಣತಾ ಪದಕಗಳನ್ನು ರೋವರ್‌ಗಳು ಧರಿಸುವಂತಿಲ್ಲ.

**11. ಸಮುದಾಯ ಕಾರ್ಯಕರ್ತ (Community Worker)**



1. ಸಮುದಾಯ ಅಭಿವೃದ್ಧಿಯ ಕಾರ್ಯ ವಿಧಾನವನ್ನು ತಿಳಿದಿರಬೇಕು.

2. ಗ್ರಾಮದ ಕನಿಷ್ಠ 12 ಯುವಕರ ಮನವೊಲಿಸಿ ಸಂಸ್ಥೆಗೆ ಸೇರಲು ಪ್ರಚೋದಿಸಬೇಕು ಮತ್ತು ರೋವರ್ ತಂಡವನ್ನು ಪ್ರಾರಂಭಿಸಬೇಕು.

3. ಸಮುದಾಯ ಹಾಗೂ ಇತರ ಅಭಿವೃದ್ಧಿ ಸಂಪನ್ಮೂಲ ಉದಾ: ಬ್ಯಾಂಕ್, ಆಸ್ಪತ್ರೆ, ವಿಶೇಷ ತಜ್ಞರು ಇತ್ಯಾದಿ ಸಂಸ್ಥೆಗಳಿಗೆ ಮಧ್ಯವರ್ತಿ ಆಗಿರಬೇಕು.

4. ಕನಿಷ್ಠ ಎರಡು ಮೂಲಭೂತ ಅವಶ್ಯಕತೆಗಳ ಉದಾ: ಶುದ್ಧನೀರು, ಶಾಲಾ ಕಟ್ಟಡ, ತರಕಾರಿ ಮಾರುಕಟ್ಟೆ ಮತ್ತಿತರ ಪರಿಹಾರಕ್ಕಾಗಿ ಯೋಜಿಸಲು ಸಹಕರಿಸಬೇಕು.

5. ತನ್ನ ಗ್ರಾಮ, ಮೊಹಲ್ಲಾ, ಕೊಳಚೆ ಪ್ರದೇಶದಲ್ಲಿ ಲಸಿಕಾ ಶಿಬಿರವನ್ನು ಸಂಘಟಿಸಬೇಕು.

6. ಅವಿರತವಾದ ಸಮುದಾಯ ಅಭಿವೃದ್ಧಿ ಕಾರ್ಯಕ್ರಮವನ್ನು ಜಾರಿಗೊಳಿಸಬೇಕು ಮತ್ತು ಅದರಲ್ಲಿ ಭಾಗವಹಿಸಬೇಕು.

7. ಆ ರೀತಿಯ ಯೋಜಿತ ಶಿಬಿರಗಳಲ್ಲಿ ಸೇವೆ ಸಲ್ಲಿಸಲು ಕಾಯ್ದಿರಿಸಿಕೊಂಡು ಬೋಧಕರಾಗಿ, ಪರೀಕ್ಷಕರಾಗಿ, ಶಿಬಿರ ಮಾರ್ಗದರ್ಶಕರಾಗಿ ಸಕ್ರಿಯವಾಗಿ ಸಹಕರಿಸಬೇಕು.

**12. ಕಂಪ್ಯೂಟರ್ ಕೆಲಸಗಾರ (Computer Operator)**



1. ಕಂಪ್ಯೂಟರ್‌ಗಳ ಚರಿತ್ರೆ ತಿಳಿದಿರಬೇಕು.

2. ಹಾರ್ಡ್‌ವೇರ್ ಮತ್ತು ಸಾಫ್ಟ್‌ವೇರ್‌ಗಳ ಮಧ್ಯೆ ಇರುವ ವ್ಯತ್ಯಾಸ ಹೇಳುವಂತಿರಬೇಕು.

3. ಕಂಪ್ಯೂಟರ್ ಒಳಗಿನ ಉಪಾಯತಂತ್ರ (devices) ಗಳನ್ನು ಗುರುತಿಸಿ ವರ್ಗೀಕರಿಸಬೇಕು.

4. RAM, ROM, CPU, PROCESSOR ವ್ಯವಹಾರ ಪದ್ಧತಿಗಳು ತಿಳಿದಿರಬೇಕು.

5. M.S. Office ಬಗ್ಗೆ ನಿಷ್ಣಾತರಾಗಿದ್ದು, ಸ್ಥಳೀಯ/ಜಿಲ್ಲಾ ಕಾರ್ಯಾಲಯಗಳಲ್ಲಿ ಕನಿಷ್ಠ 3 ತಿಂಗಳುಗಳ ಕಾಲ ಮಾಹಿತಿಯನ್ನು ದಾಖಲಿಸುವ ಬಗ್ಗೆ ಸಹಾಯ ಮಾಡಿರಬೇಕು.

6. ಕಂಪ್ಯೂಟರ್‌ನ ಮೂಲಭೂತ ಉಪಯೋಗ ತಿಳುವಳಿಕೆಯ ಬಗ್ಗೆ ಕನಿಷ್ಠ 10 ಮಂದಿ ಯುವಕರಿಗೆ ಶಿಕ್ಷಣ ಕೊಡಬೇಕು.

7. ವಿವಿಧ ಸಾಫ್ಟ್‌ವೇರ್ ಮತ್ತು ಅವುಗಳ ಉಪಯೋಗ ತಿಳಿದಿರಬೇಕು.

8. ಅಂತರ್ಜಾಲ (Internet) ಮತ್ತು ಅದನ್ನು ಸ್ಥಾಪಿಸುವ/ಜೋಡಿಸುವ ಬಗ್ಗೆ ತಿಳಿದಿರಬೇಕು.

9. ಹಾರ್ಡ್ ಡಿಸ್ಕ್, ಪೆನ್‌ಡ್ರೈವ್, ಫ್ಲಾಷ್‌ಡ್ರೈವ್, ಎಸ್.ಡಿ. ಕಾರ್ಡ್ ಮತ್ತು ಸಿ.ಡಿ. ಮೊದಲಾದವುಗಳಲ್ಲಿ ಈ ಕಡತಗಳನ್ನು (ಫೈಲ್) ಕಾದಿರಿಸುವುದು ತಿಳಿದಿರಬೇಕು.

**13. ಆರೋಹಿ (Climber)**



1. 18 ವರ್ಷಗಳು ಪೂರ್ಣವಾಗಿರಬೇಕು.

2. ಕನಿಷ್ಠ 4 ಕಿ.ಮೀ. ಪರ್ವತ ಪ್ರದೇಶದ ಬಗ್ಗೆ ತಿಳಿದಿರಬೇಕು. ತುರ್ತುಸ್ಥಿತಿಯಲ್ಲಿ ಪರ್ವತದ ಕೆಳಭಾಗಕ್ಕೆ ದಾರಿ, ಶಿಖರದ ತುದಿ ಹಾಗೂ ಪ್ರೇಕ್ಷಣೀಯ ಸ್ಥಳಗಳ ಬಗ್ಗೆ ವೈಯಕ್ತಿಕವಾಗಿ ತಿಳಿದಿರಬೇಕು.

3. ಆ ರೀತಿಯ ಮಾಹಿತಿಯನ್ನು ಸುಲಭವಾಗಿ ಗುರುತಿಸುವಂತೆ ನಕ್ಷೆಯನ್ನು ತಯಾರಿಸಬೇಕು. ದೂರದಿಂದ ನೋಡುತ್ತಿದ್ದಂತೆ ಪರ್ವತಾಗ್ರಗಳನ್ನು ಗುರುತಿಸುವಂತಿರಬೇಕು.

4. ದಿಕ್ಸೂಚಿಯನ್ನು ಸರ್ವೇ ಆಫ್ ಇಂಡಿಯಾರವರ 1 ಅಂಗುಲ ನಕ್ಷೆ ಅಥವಾ ಸ್ಥಳೀಯ ತತ್ಸಮಾನ ನಕ್ಷೆಯನ್ನು ಉಪಯೋಗಿಸಿಕೊಂಡು ಪರ್ವತ ಪ್ರದೇಶಗಳಲ್ಲಿ ನಿರ್ದೇಶಿತ ಸ್ಥಳಕ್ಕೆ ದಾರಿಯನ್ನು ಕಂಡುಕೊಳ್ಳಬೇಕು ಮತ್ತು ಪರ್ವತವನ್ನೇರುವ ಶಕ್ತಿ ಸಾಮರ್ಥ್ಯಗಳನ್ನು ಪ್ರದರ್ಶಿಸಬೇಕು.

5. ಸ್ಥಳೀಯ ಹವಾಮಾನ ಸ್ಥಿತಿಯನ್ನು ತಿಳಿದಿರಬೇಕು. ಕತ್ತಲೆ ಆವರಿಸಿದಾಗ, ಮಂಜು ಗಾಳಿ ಬೀಸುವಾಗ, ಪರ್ವತಾರೋಹಣದ ವೇಳೆ ಅಸ್ವಸ್ಥತೆ ಉಂಟಾದಾಗ ಮತ್ತು ಇಬ್ಬನಿ ಸುರಿಯುವಂತಹ ತುರ್ತು ಸಂದರ್ಭಗಳಲ್ಲಿ ಏನು ಮಾಡಬೇಕು ಎಂಬುದನ್ನು ತಿಳಿದಿರಬೇಕು. ಭೂಕುಸಿತದ ಅಪಾಯದ ಬಗ್ಗೆ ಸಹ ತಿಳಿದಿರಬೇಕು.

6. ಮೂಳೆ ಮುರಿತ, ಕೀಲು ಅಲುಗುವುದು, ಜಜ್ಜುಗಾಯ, ಮೆದುಳಿನ ಅದುರುವಿಕೆ, ಗಾಬರಿ ಮತ್ತು ಶ್ವಾಸ ಸಂಬಂಧ ಆಘಾತಗಳಿಗೆ ನೀಡಬೇಕಾದ ಪ್ರಥಮ ಚಿಕಿತ್ಸೆಯನ್ನು ತಿಳಿದಿರಬೇಕು. ರೋಗಿಗಳನ್ನು ಸಾಗಿಸುವ ವಿಧಾನವನ್ನು ಸಹ ತಿಳಿದಿರಬೇಕು.

7. ಕನಿಷ್ಠ ಚಾರಣ ಉಪಕರಣಗಳೊಂದಿಗೆ 1200 ಮೀ. ಎತ್ತರದ ಪರ್ವತ ಪ್ರದೇಶದಲ್ಲಿ ಒಂದು ವಾರ ಚಾರಣ ಕೈಗೊಳ್ಳಬೇಕು. ಆ ಒಂದು ವಾರದಲ್ಲಿ ಕನಿಷ್ಠ 3 ರಾತ್ರಿ ಅನುಕ್ರಮವಾಗಿರಬೇಕು.

8. ವಿವಿಧ ಹವಾಮಾನಗಳ ಹಾಗೂ ವಿವಿಧ ಎತ್ತರಗಳ ಪರ್ವತ ಪ್ರದೇಶಗಳಲ್ಲಿ ಚಾರಣ ಕೈಗೊಳ್ಳಬೇಕಾದರೆ ಅವಶ್ಯಕವಾದ ಉಪಕರಣಗಳ ಬಗ್ಗೆ ತಿಳಿದಿರಬೇಕು.

9. ಅಧಿಕೃತ ಪರ್ವತಾ ರೋಹಣದ ಮೂಲ ತರಬೇತಿ ಶಿಬಿರದಲ್ಲಿ ಭಾಗ ವಹಿಸಿರಬೇಕು.

**14. ಮರಳುಗಾಡು ವಾಸಿಗಳು (Desert Folk)**

**ಕೆಳಗಿನ ಅಂಶಗಳ ಬಗ್ಗೆ ತಿಳಿದಿರಬೇಕು.**

1. ಸ್ವತಃ ಅಧ್ಯಯನದ ಹಾಗೂ ಗಮನಿಸುವುದರ ಮೂಲಕ ಮರಳುಗಾಡಿನ ಜೀವನದ ಬಗ್ಗೆ ಕೆಳಗಿನ ವಿಷಯಗಳನ್ನು ತಿಳಿಯಬೇಕು.



   i) ಭೌಗೋಳಿಕ ಹಿನ್ನೆಲೆಯಲ್ಲಿ ಭೂಮಿ, ನದಿಗಳು, ಹವಾಮಾನ ಇತ್ಯಾದಿ.

   ii) ಜನರು ಜೀವಿಸುವ ರೀತಿ.

   iii) ಜೀವನದ ರೀತಿ, ನೀತಿಗಳು, ಜೀವನ ಮಟ್ಟ, ಸಾಮಾನ್ಯ ಉಡಿಗೆ ತೊಡಿಗೆ, ಆಹಾರ, ಅಭ್ಯಾಸಗಳು ಇತ್ಯಾದಿ.

   iv) ಜನರ ಸಾಮಾನ್ಯ ಸಂಪ್ರದಾಯಗಳು, ವಿಶೇಷ ಆಚರಣೆಗಳು, ಸಂಸ್ಕೃತಿ, ಧರ್ಮ, ಮೂಢನಂಬಿಕೆಗಳು ಮತ್ತು ನಿಷೇಧಗಳು.

   v) ಪ್ರಕೃತಿ ವಿಕೋಪದಿಂದ ಜನರಿಗೆ ಒದಗುವ ಸಾಮಾನ್ಯ ಸಮಸ್ಯೆಗಳು ಮತ್ತು ಅವುಗಳ ಪರಿಹಾರ ಅಂಶಗಳ ಬಗ್ಗೆ ಅಧ್ಯಯನ ಮಾಡಿದ ವರದಿ ಅಥವಾ ಮೂರು ಚಾರಣಗಳ ವರದಿಗಳನ್ನು ಸಲ್ಲಿಸಬೇಕು. ವರದಿಯು ಆರಿಸಿಕೊಂಡ ಗ್ರಾಮ ಅಥವಾ ಪಟ್ಟಣದಿಂದ 15 ಚ.ಮೈಲಿ ಅಥವಾ 24 ಚ.ಕಿ.ಮೀ. ಸುತ್ತಳತೆಯಲ್ಲಿ ಬರುವ ಪ್ರದೇಶವನ್ನು ಒಳಗೊಂಡಿರಬೇಕು. ಜೊತೆಗೆ ಪ್ರದೇಶದಲ್ಲಿ ಬರುವ ಹಾದಿಗಳು, ವಸತಿ

ಸ್ಥಳಗಳು, ನೀರು ಸಿಗುವ ಜಾಗ, ಓಯಸಿಸ್ ಮತ್ತು ಶಿಬಿರ ಹೂಡಬಹುದಾದ ಸ್ಥಳ ಇವುಗಳ ಮಾಹಿತಿಯನ್ನು ಒಳಗೊಂಡಿರಬೇಕು.

2. ಪ್ರಕೃತಿ ಅಧ್ಯಯನ

i) ಹವಾಮಾನ ಸಂಬಂಧದ ಸಾಮಾನ್ಯ ಗಾದೆಗಳು ಮತ್ತು ಹೇಳಿಕೆಗಳನ್ನು ಸಂಗ್ರಹಿಸಬೇಕು ಮತ್ತು ತಿಳಿದಿರಬೇಕು. ಇವುಗಳ ಆಧಾರದ ಮೇಲೆ ತನ್ನ ಸ್ವಂತ ಗಮನಿಕೆಗಳನ್ನು ಮೇಳೈಸಿ ವರದಿಯನ್ನು ತಯಾರಿಸಬೇಕು.

ii) ಗಾಳಿಯ ವೇಗವನ್ನು ಕಂಡುಹಿಡಿಯಬೇಕು.

3. ನೀರು ಮತ್ತು ಹನಿ ನೀರಾವರಿ

i) ನೀರಾವರಿಯು ವಿಧಾನಗಳನ್ನು ತಿಳಿದಿರಬೇಕು. ನೀರನ್ನು ಶುದ್ಧಗೊಳಿಸುವ ವಿಧಾನಗಳು ಮತ್ತು ಕಲುಷಿತ ನೀರನ್ನು ಉಪಯೋಗಿಸುವುದರಿಂದ ಆಗುವ ತೊಂದರೆಗಳನ್ನು ತಿಳಿದಿರಬೇಕು. ನೀರಿನ ಅಭಾವವನ್ನು ತೊಡೆದು ಹಾಕಲು ಸರ್ಕಾರದಿಂದ ಪಡೆಯಬಹುದಾದ ಸಹಾಯದ ಬಗ್ಗೆ ತಿಳಿದಿರಬೇಕು.

ii) ಆ ಪ್ರದೇಶದ ಮುಖ್ಯ ಬೆಳೆಗಳು ಹಾಗೂ ದವಸ ಧಾನ್ಯಗಳ ಬಗ್ಗೆ ತಿಳಿದಿರಬೇಕು. ಪ್ರದೇಶದಲ್ಲಿ ನೀರಾವರಿಗಾಗಿ ಉಪಯೋಗಿಸುವ ಕಾಲುವೆ ಅಥವಾ ಅಣೆಕಟ್ಟುಗಳನ್ನು ತಿಳಿದಿರಬೇಕು ಮತ್ತು ಅಚ್ಚುಕಟ್ಟು ಪ್ರದೇಶದಲ್ಲಿ ನೀರನ್ನು ಉಳಿತಾಯ ಮಾಡುವ ಬಗ್ಗೆ ತಿಳಿದಿರಬೇಕು.

iii) **ಕರಕುಶಲತೆ:** ಆ ಪ್ರದೇಶದಲ್ಲಿ ದೊರೆಯುವ ಸಹಜ ವಸ್ತುಗಳನ್ನು ಉಪಯೋಗಿಸಿ ಸಣ್ಣ ಹಗ್ಗವನ್ನು ತಯಾರಿಸಬೇಕು ಅಥವಾ ಮಂಚವನ್ನು ಹೆಣೆಯಬೇಕು ಅಥವಾ ಮಾದರಿಗಳನ್ನು ತಯಾರಿಸಬೇಕು, ಅಥವಾ ಹೊಚ್ಚನ್ನು ಸಿದ್ಧಪಡಿಸಬೇಕು ಮತ್ತು ಅದರ ಉಪಯೋಗವನ್ನು ತೋರಿಸಿಕೊಡಬೇಕು.

4. ಚಾರಣ

i) ಮರಳುಗಾಡು ಪ್ರದೇಶದಲ್ಲಿ ವಿಶೇಷ ಸಹಜ ಘಟನೆಗಳನ್ನು ಉದಾ: ಬಿಸಿಲ್ಗುದುರೆ, ಭನ್ವಾರಿ (ಭೂಕುಸಿತ) ಇತ್ಯಾದಿಗಳ ಬಗ್ಗೆ ತಿಳುವಳಿಕೆಯನ್ನು ಚಾರಣಗಳ ಮೂಲಕ ಪಡೆಯಬೇಕು.

ii) ಮಿಡತೆ ಹಾವಳಿ (Locust) ವಿರುದ್ಧ ಕೈಗೊಳ್ಳುವ ಕಾರ್ಯಾಚರಣೆಯಲ್ಲಿ ಕನಿಷ್ಠ 51 ಗಂಟೆಗಳ ಕಾಲ ಸೇವೆ ಸಲ್ಲಿಸಬೇಕು. ಅಥವಾ ಇತರ ಅನುಮೋದಿತ ಸಮಾಜ ಸೇವಾ ಶಿಬಿರಗಳಲ್ಲಿ ಸೇವೆ ಸಲ್ಲಿಸಬೇಕು.

## 15. ವಿಪತ್ತು ನಿರ್ವಹಣೆ (Disaster Management)



1. ವಿಪತ್ತು (Disaster) ಮತ್ತು ಕಂಟಕ (Hazard) ಗಳ ನಿರೂಪಣೆ (Definition) ತಿಳಿದಿರಬೇಕು.
2. ಸ್ವಾಭಾವಿಕವಾದ ಮತ್ತು ಮಾನವ ನಿರ್ಮಿತವಾದ ವಿವಿಧ ರೀತಿಯ ವಿಪತ್ತುಗಳನ್ನು ಸ್ಥಳೀಯವಾಗಿ ನಿರೀಕ್ಷಿಸಬಹುದಾದ ಬಗ್ಗೆ ತಿಳಿದಿರಬೇಕು.
3. ವಿಪತ್ತು ನಿರ್ವಹಣೆಗಾಗಿ ಕಾರ್ಯಪ್ರವೃತ್ತವಾಗಿರುವ ವಿವಿಧ ಸಂಸ್ಥೆಗಳ ಪಾತ್ರವನ್ನು ತಿಳಿದಿರಬೇಕು.
4. ವಿಪತ್ತು ಸಂಸಿದ್ಧತೆ ಎಂದರೇನು ವಿವರಿಸಬೇಕು ಮತ್ತು ಆ ಬಗ್ಗೆ ವಿವಿಧ ಅಂಶಗಳ ಪಟ್ಟಿ ಮಾಡಬೇಕು.
5. ವಿಪತ್ತು ಪರಿಹಾರ ಕಾರ್ಯವನ್ನು ವಿವರಿಸಬೇಕು ಮತ್ತು ವಿಪತ್ತು ಪರಿಹಾರ ಕಾರ್ಯದಲ್ಲಿ ರೋವರ್‌ಗಳ ಪಾತ್ರವನ್ನು ವಿವರಿಸಬೇಕು.
6. ನಾಗರಿಕ ರಕ್ಷಣೆ, ಅಗ್ನಿಶಾಮಕದಳ ಮತ್ತು 'ಹ್ಯಾಂ' ಸೇವೆಯ ಬಗ್ಗೆ ತಿಳಿದಿರಬೇಕು.
7. ವಿಪತ್ತು ಪರಿಹಾರ ಕಾರ್ಯ ಮತ್ತು ಗಾಯಗೊಂಡವರ ರಕ್ಷಣೆ ಸಂದರ್ಭಗಳಲ್ಲಿ ಆಧುನಿಕ ಪ್ರಥಮ ಚಿಕಿತ್ಸೆ; ಸಂರಕ್ಷಣಾ (Rescue) ಸೇವೆ ಮತ್ತು ರಕ್ತದಾನ ಇವುಗಳ ಬಳಕೆಯ ಬಗ್ಗೆ ತಿಳಿದಿರಬೇಕು.
8. ಸ್ಥಳೀಯವಾಗಿ ನಿಮ್ಮ ಕ್ಷೇತ್ರದಲ್ಲಿ ಅಪಘಾತಕ್ಕೊಳಗಾಗುವ ಪ್ರದೇಶಗಳ ಬಗ್ಗೆ ತಿಳಿದಿರಬೇಕು.
9. ಹ್ಯಾಂ, ದೂರ ಸಂಚಾರ, ಅಂತರ್ಜಾಲ ಮುಂತಾದ ವಿವಿಧ ಸಂಪರ್ಕ ಸಾಧನಗಳ ಮೂಲಕ ವ್ಯವಹರಿಸಲು ತಿಳಿದಿರಬೇಕು.

10. ಪುನರ್ವಸತಿ ವಿಧಾನಗಳನ್ನು ಹೇಳಬೇಕು ಮತ್ತು ಈ ದಿಕ್ಕಿನಲ್ಲಿ ಬೆಂಬಲ ನೀಡುವ ಸರ್ಕಾರಿ ಸಂಸ್ಥೆಗಳು ಮತ್ತು ಎನ್.ಜಿ.ಓ.ಗಳನ್ನು ಕಂಡುಕೊಳ್ಳಬೇಕು.
11. ಪರಿಹಾರ ಕಾರ್ಯದಲ್ಲಿ ಸಹಾಯ ಮಾಡಬೇಕು ಅಥವಾ ಭಾಗವಹಿಸಬೇಕು.

**16. ವಿಪತ್ತು ಸನ್ನದ್ಧತೆ (Disaster Preparedness)**



1. ವಿಪತ್ತು ಯಾವ ರೀತಿಯದು ತಿಳಿಯಬೇಕು.
2. ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಅಥವಾ ಇತರೆ ಯಾವುದೇ ಮಾನ್ಯತೆ ಪಡೆದ ಸಂಸ್ಥೆಯವರು ಏರ್ಪಡಿಸಿದ "ವಿಪತ್ತು ನಿರ್ವಹಣಾ ಶಿಬಿರ"ದಲ್ಲಿ ಭಾಗವಹಿಸಿರಬೇಕು.
3. ನಾಗರಿಕ ರಕ್ಷಣೆ ಮತ್ತು ಸಂರಕ್ಷಣಾ ವಿಧಾನಗಳ ಬಗ್ಗೆ ಸಾಮಾನ್ಯ ತಿಳುವಳಿಕೆ ಇರಬೇಕು.
4. ಭೂಕಂಪನ, ಪ್ರವಾಹ ಅಥವಾ ಇತರೇ ಸ್ಥಾನಿಕ, ನಿರೀಕ್ಷಿತ ವಿಪತ್ತುಗಳ ಸಂದರ್ಭಗಳಲ್ಲಿ ತೆಗೆದುಕೊಳ್ಳಬೇಕಾದ ಮುನ್ನೆಚ್ಚರಿಕೆ ಕ್ರಮಗಳ ಜಾಗೃತಿ ಮೂಡಿಸಲು, ಪ್ರದರ್ಶನಗಳು, ಬೀದಿ ನಾಟಕ, ಮನೆಮನೆಗೆ ಭೇಟಿ ನೀಡುವುದು ಸರ್ವೆ, ಫಿಲಂ ಷೋ ಇತ್ಯಾದಿ ಕಾರ್ಯಕ್ರಮಗಳನ್ನು ಏರ್ಪಡಿಸಬೇಕು. **ಪಠ್ಯಕ್ರಮವನ್ನು ಬೇರೆಯದಾಗಿ ಪ್ರಕಟಿಸಲಾಗುತ್ತದೆ.**

**17. ಪರಿಸರ ತಜ್ಞ (Ecologist)**

1. ಪರಿಸರ ಸಮತೋಲನಕ್ಕಾಗಿ ಕೆಲಸ ಮಾಡುತ್ತಿರುವ ಇತರ ಪ್ರತಿನಿಧಿ ಸಂಸ್ಥೆಗಳ ಅರಿವಿರಬೇಕು.
2. ಮರಗಳನ್ನು ಕಡಿಯುವುದಕ್ಕೆ ವಿರುದ್ಧವಾಗಿ ಪ್ರಚಾರ ಮಾಡಬೇಕು.



3. ಮಳೆಗಾಲದಲ್ಲಿ ವನಮಹೋತ್ಸವ ಆಚರಿಸಬೇಕು.
4. ಪ್ರಾದೇಶಿಕವಾಗಿ ಪರಿಸರ ಮಾಲಿನ್ಯ ಸಮಸ್ಯೆಗಳ ಬಗ್ಗೆ ಜನರಿಗೆ ಶಿಕ್ಷಣ ನೀಡಬೇಕು.

5. ಈ ಕೆಳಗಿನವುಗಳಲ್ಲಿ ಯಾವುದಾದರೂ 3 ಸಮಸ್ಯೆಗಳನ್ನು ಪರಿಹರಿಸಲು ಕೆಲಸ ಮಾಡಬೇಕು.

   ಅ) ಭೂಸವೆತ

   ಆ) ಮರ ಕಡಿಯುವುದು

   ಇ) ಪ್ರಾಣಿ ವಧೆ

   ಈ) ನೀರು ಪೋಲು ಮಾಡುವುದು ಅಥವಾ ಜಲಮಾಲಿನ್ಯ

   ಉ) ವಾಯು ಮಾಲಿನ್ಯ

   ಊ) ಕಸ ಹಾಕುವುದು

   ಋ) ಶಬ್ದ ಮಾಲಿನ್ಯ

6. "ಪರಿಸರ ಸಮತೋಲನ ಜಾಗೃತಿ"ಯ ಬಗ್ಗೆ ಸ್ಥಳೀಯವಾಗಿ ಪ್ರದರ್ಶನ ಏರ್ಪಡಿಸಬೇಕು. ಅಥವಾ

   ಮರಗಳ ಪ್ರಾಮುಖ್ಯತೆಯ ಬಗ್ಗೆ ಸಾರ್ವಜನಿಕವಾಗಿ ಜಾಗೃತಿ ಉಂಟಾಗಲು ಸ್ಥಳೀಯವಾಗಿ ಬೀದಿನಾಟಕವನ್ನು ಏರ್ಪಡಿಸಬೇಕು.

7. ವಿಶೇಷ ದಿನಗಳಲ್ಲಿ ಉದಾ: ಪರಿಸರ ದಿನಾಚರಣೆ, ಭೂಮಿ ದಿನಾಚರಣೆ, ಹೊಗೆಸೊಪ್ಪು ವಿರುದ್ಧ ದಿನಾಚರಣೆ ಇತ್ಯಾದಿ ಜಾಗೃತಿ ಕಾರ್ಯಕ್ರಮವನ್ನು ಏರ್ಪಡಿಸಬೇಕು.

## 18. (ಇಂಧನ) ಶಕ್ತಿ ಸಂರಕ್ಷಣೆ (Energy Conservation)

1. ವಿವಿಧ (ಇಂಧನ) ಶಕ್ತಿ ಮೂಲಗಳನ್ನೂ ಅವುಗಳ ಉಪಯೋಗಗಳನ್ನೂ ತಿಳಿದಿರಬೇಕು.

2. ನಮ್ಮ ದೇಶದಲ್ಲಿ ಲಭ್ಯವಿರುವ, ಸಾಂಪ್ರದಾಯಿಕವಲ್ಲದ ಶಕ್ತಿಮೂಲಗಳನ್ನು ಪಟ್ಟಿ ಮಾಡಬೇಕು.



3. ವಿದ್ಯುತ್ ವಿತರಣ ಕ್ರಮದ ಬಗ್ಗೆ ತಿಳುವಳಿಕೆ ಇರಬೇಕು.

4. ಉಪಯೋಗವಿಲ್ಲದ ಸಮಯ ಎಲೆಕ್ಟ್ರಿಕ್ ಫ್ಯಾನ್ ಮತ್ತು ದೀಪಗಳನ್ನು ಆರಿಸಿ (ಶಕ್ತಿಯ) ಉಳಿತಾಯ ಮಾಡಬೇಕು.

5. ಬಿರುಕುಬಿಟ್ಟ/ಕಿಟಕಿಯ ಏರ್‌ಕಂಡಿಷನರ್ ಅನ್ನು ಸರಿಪಡಿಸಲು ತಿಳಿದಿರಬೇಕು.

6. ಸೌರಶಕ್ತಿ, ಸೌರಶಕ್ತಿಯ ಬಗ್ಗೆ ಸರ್ಕಾರದ ಯೋಜನೆಗಳು, ಅವುಗಳನ್ನು ಒದಗಿಸುವ ಸಂಸ್ಥೆಗಳು ಇವುಗಳ ಬಗ್ಗೆ ತಿಳಿದಿದ್ದು, ಸ್ಥಳೀಯವಾಗಿ ಸೌರಶಕ್ತಿಯ ಬಳಕೆಯ ಬಗ್ಗೆ ಪ್ರಚಾರ ಮಾಡಬೇಕು.

7. ವಿದ್ಯುಚ್ಛಕ್ತಿಯ ಉಳಿತಾಯಕ್ಕಾಗಿ ವಿವಿಧ ಮಾರ್ಗಗಳು, ಅದರ ಅರ್ಥ ತಿಳಿದಿರಬೇಕು.

8. ಮೇಲ್ಕಂಡ ವಿಷಯಗಳ ಬಗ್ಗೆ ಪರಿಣಾಮಕಾರಿಯಾದ ವರದಿಯನ್ನು ತಯಾರಿಸಿ, 3 ತಿಂಗಳ ಅವಧಿಯಲ್ಲಿ ಶಕ್ತಿಯ ಉಳಿತಾಯ ಆದ ಬಗ್ಗೆ, ಪರೀಕ್ಷಕರಿಗೆ ವರದಿ ಸಲ್ಲಿಸಬೇಕು.

**19. ಅನ್ವೇಷಕ (Explorer)**



1. ವಿವಿಧ ರೀತಿಯ ನಕ್ಷೆಗಳನ್ನು ಓದಲು ಬರಬೇಕು ಮತ್ತು ವಿವಿಧ ಸ್ಥಳಗಳನ್ನು ಕಂಡುಕೊಳ್ಳಬೇಕು.

2. ನಕ್ಷೆಯ ಮೇಲೆ ಪ್ರಮುಖ ಸ್ಥಳಗಳನ್ನು ಗುರುತಿಸಬೇಕು.

3. ನೀವಿರುವ ಸ್ಥಳದಿಂದ ಮತ್ತೊಬ್ಬ ಸದಸ್ಯನೊಂದಿಗೆ, ಕನಿಷ್ಠ 75 ಕಿ.ಮೀ. ಚಾರಣ/ಅನ್ವೇಷಣೆ ಕೈಗೊಳ್ಳಬೇಕು. ಹೊಸ ಜಾಗಗಳನ್ನು ಅನ್ವೇಷಿಸಬೇಕು. ಚಿತ್ರಗಳನ್ನು ಸಂಗ್ರಹಿಸಬೇಕು. ನಕಾಶೆ ತಯಾರಿಸಬೇಕು.

4. ನಿಮ್ಮ ತಂಡದ 4 ಜನರನ್ನು ಈ ಸ್ಥಳಗಳಿಗೆ ಭೇಟಿ ನೀಡಲು ಮಾರ್ಗದರ್ಶನ ನೀಡಬೇಕು.

5. ಆ ಪ್ರದೇಶದ ಸಸ್ಯಸಂಪತ್ತು ಮತ್ತು ಪ್ರಾಣಿಸಂಪತ್ತು ಬಗ್ಗೆ ಪಟ್ಟಿ ಮಾಡಬೇಕು.

6. ಅನ್ವೇಷಿತ ಪ್ರದೇಶದ ಭೌಗೋಳಿಕ ವೈಶಿಷ್ಟ್ಯಗಳನ್ನು ತಿಳಿದಿರಬೇಕು.

**20. ಕುಟುಂಬ ಜೀವನ ಶಿಕ್ಷಕ (Family Life Educator)**

ಕುಟುಂಬ ಪದ್ಧತಿಯ ಪರಿಮಿತಿಯಲ್ಲಿ ಕುಟುಂಬವು ಆರೋಗ್ಯಕರ ಬಾಳ್ವೆ ನಡೆಸುವ ಬಗ್ಗೆ ಕುಟುಂಬ ಜೀವನ ಶಿಕ್ಷಣವು ಗಮನ ಹರಿಸುತ್ತದೆ ಮತ್ತು



ಮೂಲತಃ ಆರೋಗ್ಯ ಬಾಳ್ವೆಯು ಕೆಡದಂತೆ ರಕ್ಷಿಸುವುದು ಅದರ ಉದ್ದೇಶವಾಗಿದೆ. ಕುಟುಂಬದ ಆರೋಗ್ಯಕರ ಬಾಳ್ವೆಗೆ ಅವಶ್ಯಕವಾದ ಕೌಶಲಗಳು ಮತ್ತು ತಿಳುವಳಿಕೆ ಹೀಗಿದೆ:

1. ಕುಟುಂಬದ ಸದಸ್ಯರು ವೈಯಕ್ತಿಕವಾಗಿ ಹಾಗೂ ಒಟ್ಟುಗೂಡಿ ಕುಟುಂಬವು ಬಾಳಲು ಅವಶ್ಯಕವಾದ ತಿಳುವಳಿಕೆ ಮತ್ತು ಕೌಶಲಗಳನ್ನು ಕನಿಷ್ಠ 5 ಕುಟುಂಬಗಳಿಗೆ ಕಲಿಸುವುದು.
2. ಸ್ಥಳೀಯವಾಗಿ ಕುಟುಂಬ ಸದಸ್ಯರುಗಳಿಗೆ, ಹೆಚ್ಚು ಮಕ್ಕಳಿರುವುದರಿಂದ ಆಗುವ ಪರಿಣಾಮಗಳ ಬಗ್ಗೆ ತಿಳಿಯ ಹೇಳುವುದು ಮತ್ತು ಪರೀಕ್ಷಕರಿಗೆ ಸಂಕ್ಷಿಪ್ತ ವರದಿಯನ್ನು ಒಪ್ಪಿಸುವುದು.
3. ಅಸ್ತಿತ್ವ ದುರುಪಯೋಗ (Substrance abuse) ಮನೆಯೊಳಗಿನ ಹಿಂಸಾಚಾರ (Demestic Violence) ಮಕ್ಕಳ ದುರುಪಯೋಗ (Child abuse) ನಿರುದ್ಯೋಗ, ಸಾಲ ಮತ್ತು ನಿಂದೆ ಇವುಗಳಲ್ಲಿ ಎರಡು ವಿಷಯಗಳ ಬಗ್ಗೆ ತಿಳಿದು, ಅವುಗಳನ್ನು ತಡೆಗಟ್ಟುವ ಆಂದೋಲನವನ್ನು ಏರ್ಪಡಿಸುವುದು.
4. ಕುಟುಂಬ ಜೀವನ ಶಿಕ್ಷಣದ ಬಗ್ಗೆ ಭಿತ್ತಿಪತ್ರಗಳ ಒಂದು ಪ್ರದರ್ಶನವನ್ನು ಏರ್ಪಡಿಸುವುದು.
5. ಕುಟುಂಬ ಕಲ್ಯಾಣ ಯೋಜನೆಯ ಬಗ್ಗೆ 5 ಕುಟುಂಬಗಳನ್ನು ಒಪ್ಪಿಸಲೂ, 5 ದಂಪತಿಗಳು ಸರ್ಕಾರದ ಜನನ ನಿಯಂತ್ರಣ ಯೋಜನೆಯನ್ನು ಒಪ್ಪಿಕೊಳ್ಳಲೂ ಪ್ರಚೋದಿಸುವುದು. ಪರೀಕ್ಷಕರಿಗೆ ಪರಿಣಾಮಕಾರಿ ವರದಿಯನ್ನು ಒಪ್ಪಿಸುವುದು.

**21. ವಸ್ತ್ರ ವಿನ್ಯಾಸಗಾರ (Fashion Designer)**



1. ವಸ್ತ್ರ ವಿನ್ಯಾಸ ಕಲೆಯ ವಿವಿಧ ಅಂಗಗಳ ಬಗ್ಗೆ ತಿಳಿದಿರಬೇಕು.
2. ವಸ್ತ್ರ ವಿನ್ಯಾಸ ಕಲೆಯ ಸಂಬಂಧ ಉಪಯೋಗಿಸುವ ಶಬ್ದ ಪರಿಭಾಷೆಯನ್ನು ತಿಳಿದಿರಬೇಕು.

3. ಸರಳವಾದ ಫ್ರಾಕು, ಬ್ಲೌಸು, ಬೇಸಿಕ್ ಟಿ–ಷರ್ಟ್, ಷರ್ಟು ಅಥವಾ ಮಹಿಳೆಯರ ಮೇಲ್ವಸ್ತ್ರ ಇವುಗಳಲ್ಲೊಂದರ ಬಗ್ಗೆ 4 ವಿನ್ಯಾಸಗಳನ್ನು ಕೊಡಬೇಕು.
4. ಕನಿಷ್ಠ 5 ವಸ್ತ್ರ ವಿನ್ಯಾಸ ಸಂಸ್ಥೆಗಳ ಪಟ್ಟಿ ಮಾಡಬೇಕು.
5. ಪರೀಕ್ಷಕರ ಆಯ್ಕೆಯಂತೆ ಅವರ ಸಮ್ಮುಖದಲ್ಲಿ 5–8 ವಯೋಮಾನದ ಮಕ್ಕಳಿಗೆ ಬೇಸಿಕ್ ಟಿ–ಷರ್ಟ್ ಅಥವಾ ಮಹಿಳೆಯರ ಮೇಲ್ವಸ್ತ್ರ (ಲೇಡಿಸ್ ಟಾಪ್)ವನ್ನು ತಯಾರಿಸಿ ತೋರಿಸಬೇಕು.
6. ವಿನ್ಯಾಸದಲ್ಲಿ ರೇಖೆ, ಆಕಾರ, ನಮೂನೆ, ಬಣ್ಣ ಮತ್ತು ರಚನೆಯ ಬಗ್ಗೆ ತಿಳಿದಿರಬೇಕು. ರೇಖೆಗಳ ವೈವಿಧ್ಯ ಮತ್ತು ಬಳಕೆ ತಿಳಿದಿರಬೇಕು.
7. ವಿನ್ಯಾಸದ ತತ್ವಗಳು, ಸರಿದೂಗಿಸುವುದು, ಪ್ರಮಾಣ, ಸಾಮರಸ್ಯ ಇವುಗಳನ್ನು ಆಕಾರ, ಅಂತರದಲ್ಲಿ ಯೋಜಿಸುವುದು ತಿಳಿದಿರಬೇಕು.
8. ಸ್ಕರ್ಟ್‌ಗಳು ಅಥವಾ ಟ್ರೌಸರ್‌ಗಳು ಇವುಗಳನ್ನು ವಿವಿಧ ರೀತಿಯಲ್ಲಿ ವಿನ್ಯಾಸ ಮಾಡುವ ಮೂಲ ಪರಿಕಲ್ಪನೆ ಇರಬೇಕು.

## 22. ಲಲಿತಕಲೆ (Fine Art)

1. ರೋವರ್ ಆದವನು ಈ ಕೆಳಗಿನ ಯಾವುದಾದರೂ ಒಂದು ವಿಷಯವನ್ನು ಆರಿಸಿಕೊಳ್ಳಬಹುದು.

   i) ಚಿತ್ರ ಬರೆಯುವುದು ಮತ್ತು ಬಣ್ಣ ಹಾಕುವುದು; ರೇಖಾಚಿತ್ರ ಬರೆಯುವುದು, ಚಿತ್ರ ಬರೆಯುವುದು ಮತ್ತು ಬೆಳಕು ಮತ್ತು ಕಪ್ಪು ಛಾಯೆ ಮಾಡಿಸುವುದು; ಸ್ಥಿರ ಚಿತ್ರಕ್ಕೆ ನೈಜ ರೀತಿ ಬಣ್ಣ ತುಂಬಿಸುವುದು; ಮತ್ತು ಭೂಮೇಲ್ಮೈ ಚಿತ್ರಣ.



   ii) **ಶಿಲ್ಪಕಲೆ:** (a) ಹಗುರವಾದ ಮತ್ತು ದುಂಡನೆಯ ಕೆತ್ತನೆ (Reliefed round sculpture); (b) ಜೇಡಿಮಣ್ಣಿನ ಕೃತಿ ರಚನೆ (Clay Modelling); (c) ಅಂದಗೊಳಿಸುವ ಬಿರುಸು ಮಣ್ಣಿನ ಕೃತಿ (Terrocotta); (d) ಮರ ಮತ್ತು ಕಲ್ಲಿನ ಕೆತ್ತನೆ (Wood & Stone Sculpting); (e) ಕಂಚು ಕೃತಿ ಅಚ್ಚು ಹೊಯ್ಯುವುದು (Bronze Casting); (f) ಮೂರ್ತಿ ಮತ್ತದರ ಕೃತಿ ರಚನೆ (ಗ್ರಾಫಿಕ್ಸ್) (Graphics)

iii) **ಅನ್ವಯಿತ ಕಲೆ:** ಈ ಕೆಳಗಿನ ಯಾವುದಾದರೊಂದು ಕಲೆಯನ್ನು ವಿನ್ಯಾಸ ಮಾಡಿ, ನಿಮ್ಮ ಸಾಮರ್ಥ್ಯವನ್ನು ನಿರೂಪಿಸಿ.

ಅ. ಔದ್ಯಮಿಕ ವಿನ್ಯಾಸ

ಆ. ಗ್ರಾಫಿಕ್ಸ್ ವಿನ್ಯಾಸ

ಇ. ವಸ್ತ್ರ ವಿನ್ಯಾಸ

ಈ. ಒಳಾಂಗಣ ವಿನ್ಯಾಸ

ಉ. ಅಲಂಕಾರಿಕ ಕಲೆ

ಊ. ವಾಸ್ತುಶಿಲ್ಪ

ಎ. ಛಾಯಾಗ್ರಹಣ

iv) **ವಾಣಿಜ್ಯ ಕಲೆ:** ವಾರ/ ಮಾಸಪತ್ರಿಕೆಯ ಮುಖಪುಟ ವಿನ್ಯಾಸ ಅಥವಾ ವಾರ್ತಾ ಪತ್ರಿಕೆಯ ಮುಖಪುಟ ವಿನ್ಯಾಸ ತಯಾರಿಸಬೇಕು.

2. ಉತ್ತಮ ರೀತಿಯ ವಿನ್ಯಾಸವನ್ನು ತಯಾರಿಸಿ, ತರಬೇತಿ ಶಿಬಿರಗಳಲ್ಲಿ, ಪ್ರದರ್ಶನ ಶಾಲೆಗಳಲ್ಲಿ ಪ್ರದರ್ಶಿಸಬೇಕು. ಈ ರೀತಿಯಲ್ಲಿ ಆಯ್ಕೆಯಾದ ಕೃತಿ ವಿನ್ಯಾಸವನ್ನು ಪರೀಕ್ಷಕರ ಸಮ್ಮುಖ ಪ್ರಾರಂಭಿಸಿರಬೇಕು.

## 23. ಪ್ರಥಮ ಚಿಕಿತ್ಸಕ (First Aider)

1. ಪ್ರಥಮ ಚಿಕಿತ್ಸೆಯ ಮೂಲ ತತ್ವಗಳು ಮತ್ತು ಅತ್ಯಮೂಲ್ಯ– ಸ್ವರ್ಣಪ್ರಾಯ ನಿಯಮಗಳನ್ನು ತಿಳಿದಿರಬೇಕು.

2. ಧರಿಸಿರುವ ಉಡಿಗೆ/ತೊಡಿಗೆಗಳಿಗೆ ಬೆಂಕಿ ಸೋಕಿರುವ ವ್ಯಕ್ತಿಗೆ ಯಾವ ರೀತಿಯಲ್ಲಿ ಸಹಾಯ ಮಾಡಬೇಕು.



3. ಸ್ಥಳೀಯವಾಗಿ ಬಟ್ಟೆಗಳಿಗೆ ಬೆಂಕಿ ಸೋಕಿದ ವ್ಯಕ್ತಿಗೆ ಸಹಾಯ ಮಾಡುವ ಬಗ್ಗೆ ಅಣಕು ಕವಾಯತು ಏರ್ಪಡಿಸಬೇಕು.

4. ಬೆಂಕಿ ಹೊತ್ತಿಕೊಂಡ ಮತ್ತು ವಿಷಾನಿಲ ಪ್ರದೇಶದಲ್ಲಿ ಸಿಲುಕಿಕೊಂಡಿರುವ ವ್ಯಕ್ತಿಯನ್ನು ರಕ್ಷಿಸುವ ಬಗ್ಗೆ ನಿಮ್ಮ ತಂಡ ಸದಸ್ಯರಿಗೆ ತರಬೇತಿ ನೀಡಬೇಕು.

5. ಜೀವರಕ್ಷಣೆಗಾಗಿ ಹಗ್ಗವನ್ನು ಎಸೆಯುವುದು (Throwing a life line): ನೀರಿನಲ್ಲಿ ಮುಳುಗುತ್ತಿರುವ ವ್ಯಕ್ತಿಯನ್ನು ರಕ್ಷಿಸುವುದು ಮತ್ತು

ಕರೆದೊಯ್ಯುವುದು (ಕ್ಯಾರಿಯಿಂಗ್); ನೀರಿನಲ್ಲಿ ಮುಳುಗುತ್ತಿರುವವನ ಬಳಿ ಸಾರುವುದು; ಸಂತ್ರಸ್ತನನ್ನು ಹಿಡಿದು ತರುವುದು ಮತ್ತು ಪುನಶ್ಚಾಸ ನೀಡುವುದು (ಎಬಿಸಿ ವಿಧಾನ).

6. (ನಿಮ್ಮ) ಸಮೀಪದ ಆರೋಗ್ಯ/ಪ್ರಥಮ ಚಿಕಿತ್ಸಾ ಕೇಂದ್ರ ಅಥವಾ ಆಸ್ಪತ್ರೆಯಲ್ಲಿ 3 ತಿಂಗಳ ಕಾಲ ಸೇವಾ ಕಾರ್ಯ ನಡೆಸಿ, ಪರಿಣಾಮಕಾರಿಯಾದ ವರದಿಯನ್ನು ಪರೀಕ್ಷಕರಿಗೆ ಒಪ್ಪಿಸುವುದು.

**24. ಮೊದಲ ತೊಡಕು (First Knot)**



1. ವಿವಿಧ ರೀತಿಯ ಹಗ್ಗಗಳು ಮತ್ತು ಅದರ ಭಾಗಗಳು ತಿಳಿದಿರಬೇಕು.
2. ಮಲುಕುಗಳು (Hitches) ತಿರುವುಗಳು (Bends) ಮಣಿಗಳು ಮತ್ತು ತಡೆತ (Stopper) ಗಂಟುಗಳ ಬಗ್ಗೆ ತಿಳಿದಿರಬೇಕು.
3. ಹಾದಿಕಟ್ಟು (Jam) ಎಂದರೇನು ತಿಳಿದಿರಬೇಕು.
4. ಸ್ಕೌಟುಗಳ ಅಗ್ರಗಾಮಿ ಪ್ರವೀಣತಾ ಪದಕವನ್ನು ಸಂಪಾದಿಸಬೇಕು.
5. ಈ ಕೆಳಗಿನ ಗಂಟುಗಳನ್ನು ಹಾಕುವುದು ಮತ್ತು ಅವುಗಳ ಉಪಯೋಗ ತಿಳಿದಿರಬೇಕು.

   ಅ) ಡಬಲ್ ಷೀಟ್ ಬೆಂಡ್ ಆ) ಟಾಟ್‌ಲೈನ್ ಹಿಚ್

   ಇ) ಎಡಗೈನಲ್ಲಿ ಷೀಟ್‌ಬೆಂಡ್ ಹಾಕುವುದು

   ಈ) ಥೀಫ್ ನಾಟ್ ಉ) ಓವರ್ ಹ್ಯಾಂಡ್ ನಾಟ್

   ಊ) ಸ್ಯಾವಾಯ್ ನಾಟ್ ಋ) ವಾಟರ್‌ಮ್ಯಾನ್ಸ್ ನಾಟ್

   ಎ) ಲಾರ್ಕ್ಸ್ ಹೆಡ್

**25. ಹಾರಾಟ ಕೊಟ್ಟಾರಿ (Flight Steward)**

1. ಈ ಕೆಳ ಕಾಣಿಸಿರುವ ಅರ್ಹತೆಗಳಿರಬೇಕು

   ಅ) ಕನಿಷ್ಠ 12ನೇ ಸ್ಟಾಂಡರ್ಡ್ (ಇಂಟರ್ ಮೀಡಿಯೇಟ್) ಪಾಸ್ ಆಗಿರಬೇಕು.



ಆ) ಏರ್ ಹೋಸ್ಟೆಸ್‌ಗೆ 154.5 ಸೆಂ.ಮೀ. ಎತ್ತರ ಇರಬೇಕು ಮತ್ತು ಫ್ಲೈಟ್ ಸ್ಟೀವರ್ಡ್‌ಗೆ 170 ಸೆಂ.ಮೀ. ಎತ್ತರ ಇರಬೇಕು.

ಇ) ದೇಹದ ತೂಕವನ್ನು ಹತೋಟಿಯಲ್ಲಿಟ್ಟು ಕೊಳ್ಳಬೇಕು ಮತ್ತು ಅದು 60 ಕೆ.ಜಿ.ಗಳಿಗೆ ಮೀರಿರಬಾರದು.

ಈ) **ದೃಷ್ಟಿ:** ಪ್ರತಿಕ್ಷಣವೂ 6/24 ಇರಬೇಕು (ಸಾಮಾನ್ಯ ಕಣ್ ದೃಷ್ಟಿ)

2. ಪರಸ್ಪರ ವ್ಯವಹರಿಸುವ ಕೌಶಲವನ್ನು (Communication Skill) ತಿಳಿದಿರಬೇಕು ಮತ್ತು ಇಂಗ್ಲಿಷ್ ಹಾಗೂ ಹಿಂದಿ ಭಾಷೆಯಲ್ಲಿ ಮಾತನಾಡಲು/ ಓದಲು, ಅರ್ಥಮಾಡಿಕೊಳ್ಳಲು ಶಕ್ತನಿರಬೇಕು.

3. ಅತಿಥಿಯನ್ನು ಸ್ವಾಗತಿಸುವುದನ್ನು ಮತ್ತು ಆದರಿಸುವುದನ್ನು ತಿಳಿದಿರಬೇಕು.

4. ನೀರು, ಚಹಾ/ ಕಾಫಿ/ ತಂಪುಪಾನೀಯ ಮತ್ತು ಭೋಜನವನ್ನು ನೀಡಿ ಸತ್ಕರಿಸುವ ಬಗ್ಗೆ ತಿಳಿದಿರಬೇಕು.

5. ಪ್ರಚಲಿತ ವಿದ್ಯಮಾನಗಳ ಬಗ್ಗೆ ತಿಳಿದಿರಬೇಕು ಮತ್ತು ಸಾಮಾನ್ಯ ತಿಳುವಳಿಕೆ (General Knowledge) ಇರಬೇಕು.

6. ಏರ್‌ಹೋಸ್ಟೆಸ್‌ನ ಕೆಲಸ (Job)ವನ್ನೂ ಮತ್ತು ಅದರ ಜವಾಬ್ದಾರಿಗಳನ್ನೂ ಅರ್ಥಮಾಡಿಕೊಳ್ಳಬೇಕು.

7. ವಿವಿಧ ಏರ್‌ಲೈನ್ ಸಂಸ್ಥೆಗಳು ಮತ್ತು ಅವುಗಳ ಕಾರ್ಯಾಲಯಗಳು ಎಲ್ಲೆಲ್ಲಿ ಕೆಲಸ ಮಾಡುತ್ತಿವೆ ತಿಳಿದಿರಬೇಕು.

8. ಏರ್‌ಹೋಸ್ಟೆಸ್ / ಹಾರಾಟ ಕೊಟ್ಬಾರಿ ಕೆಲಸ ಮಾಡುವ ವಿದ್ಯಾರ್ಥಿಗಳಿಗಾಗಿ ತರಬೇತಿ ನೀಡುವ ಸಂಸ್ಥೆಗಳ ಬಗ್ಗೆ ತಿಳಿದಿರಬೇಕು.

**26. ವನವಾಸಿ (Forester)**

1. ಅರಣ್ಯ ಮತ್ತು ಅದು ಬೆಳೆಯುವ ವಿಧಾನ ಮತ್ತು "ಜೀವ ಚಕ್ರ"ದ ಮೇಲೆ (Life Cycle) ಅದರ ಪರಿಣಾಮ ತಿಳಿದಿರಬೇಕು.



2. ಎಲೆಗಳು, ಮರದ ಕಾಂಡ, ಆಕಾರಗಳ ಆಧಾರದ ಮೇಲೆ ಮರಗಳನ್ನು ಗುರುತಿಸಬೇ:ಕು.

3. ಕನಿಷ್ಠ 50 ಮರಗಳ ಉಪಯೋಗಗಳನ್ನು ಪಟ್ಟಿಮಾಡಬೇಕು.

4. ಅರಣ್ಯ ನಾಶ ಮತ್ತು ಅದರ ಹಾನಿಕರ ಪರಿಣಾಮಗಳ ಬಗ್ಗೆ ಜನಜಾಗೃತಿ ಕಾರ್ಯಕ್ರಮವನ್ನು ಏರ್ಪಡಿಸಬೇಕು ಮತ್ತು ತಿಳುವಳಿಕೆ ನೀಡಬೇಕು.

5. ಸೌದೆಯನ್ನು ಉಪಯೋಗಿಸುವುದು ಬಿಟ್ಟು ಬದಲಿ ಇಂಧನಗಳು ಮತ್ತು ಅವುಗಳ ಉಪಯೋಗವನ್ನು ಪಟ್ಟಿ ಮಾಡಬೇಕು.

6. "ಹಸಿರುಮನೆ ಪರಿಣಾಮ" (ಗ್ರೀನ್ ಹೌಸ್ ಎಫೆಕ್ಟ್)ವನ್ನು ವಿವರಿಸಬೇಕು ಮತ್ತು ಸಾದ್ಯಂತವಾಗಿ ತಿಳಿಸಬೇಕು.

7. ವಿವಿಧ ರೀತಿಯ ಕಾಡುಗಳನ್ನು ಪಟ್ಟಿಮಾಡಬೇಕು.

8. ವಿವೇಚನಾಯುತವಾಗಿ ಮರವನ್ನು ಬಳಸುವ ಬಗ್ಗೆ ಜಾಗೃತಿಯನ್ನು ಸವಿಸ್ತಾರವಾಗಿ ಮೂಡಿಸಬೇಕು ಮತ್ತು ಶಿಬಿರಾಗ್ನಿಗಳ ಸಮಯದಲ್ಲಿ ಬದಲಿ ವ್ಯವಸ್ಥೆಯನ್ನು ಪ್ರದರ್ಶಿಸಿ, ಇತರರಿಗೆ ಮಾರ್ಗದರ್ಶಕರಾಗಬೇಕು.

9. ವಿಶ್ವ ಅರಣ್ಯ ದಿನಾಚರಣೆ ಮತ್ತು ವನಮಹೋತ್ಸವಗಳನ್ನು ಆಚರಿಸಬೇಕು ಮತ್ತು ಕನಿಷ್ಠ 20 ಮರಗಳನ್ನು ನೆಡಬೇಕು.

**27. ನಾನು ಸ್ವತಂತ್ರ (Free being me)**



1. ಎಫ್.ಬಿ.ಎಂ.ನ ಪರಿಕಲ್ಪನೆಯನ್ನು ಅರ್ಥಮಾಡಿ ಕೊಂಡಿರಬೇಕು.

2. ಎಫ್.ಬಿ.ಎಂ.ನ **ಪೀರ್ಎಡ್ಯುಕೇಟರ್** ಕಾರ್ಯಾಗಾರದಲ್ಲಿ ತರಬೇತಿ ಪಡೆದಿರಬೇಕು.

3. ಕನಿಷ್ಠ 50 ಸ್ಕೌಟ್‌ಗಳು/ಗೈಡ್‌ಗಳು ಎಫ್.ಬಿ.ಎಂ. ಪದಕವನ್ನು ಪಡೆಯುವಂತೆ ಮಾರ್ಗದರ್ಶನ ನೀಡಬೇಕು.

4. 20 ಸ್ಕೌಟ್/ಗೈಡ್‌ಗಳಿಗೆ ಮುಂದಾಳಾಗಿದ್ದುಕೊಂಡು MOP ಸೈಟ್‌ನಲ್ಲಿ ನೋಂದಣಿ ಪಡೆಯುವಂತೆ ಮಾಡಬೇಕು.

5. MOP ಸೈಟ್‌ನಲ್ಲಿ ಕನಿಷ್ಠ 200 ಗಂಟೆಗಳ ಸೇವಾ ವರದಿಯನ್ನು ಅಪ್‌ಲೋಡ್ ಮಾಡಬೇಕು.

**28. ಅಂಗಸಾಧಕ (Gymnast)**



ನುರಿತ ಅಂಗಸಾಧಕನಿಂದ ತರಬೇತಿ ಪಡೆದ ಹೊರತು ಗೈಡ್‌ಗಳು ಈ ಪದಕವನ್ನು ಪಡೆಯುವಂತಿಲ್ಲ.

1. ನೇರ ನಿಲುವು, ನಡೆ ಮತ್ತು ಓಟ ಇರಬೇಕು.
2. ಶಾಲೆ ಅಥವಾ ಅನುಮೋದಿತ ದೈಹಿಕ ತರಬೇತಿ ಸಂಸ್ಥೆಯಲ್ಲಿ ಕನಿಷ್ಠ ವಾರಕ್ಕೊಮ್ಮೆಯಾದರೂ ಅಂಗಸಾಧನಾ ತರಬೇತಿಯಲ್ಲಿ ಭಾಗವಹಿಸಬೇಕು.
3. ಪರೀಕ್ಷಕರು ಅನುಮೋದಿಸಿದ ಪಟ್ಟಿ ಮಾಡಿದ ಸರಳ ರೀತಿಯ ನಿಲುವು ವ್ಯಾಯಾಮಗಳನ್ನು ಮಾಡಬೇಕು.
4. ಈ ಕೆಳಗಿನ ಪಟ್ಟಿ ಮಾಡಿದ ವ್ಯಾಯಾಮಗಳನ್ನು ಉತ್ತಮ ರೀತಿಯಲ್ಲಿ ಬಾರ್ ಮೇಲೆ ಇಕ್ಕಟ್ಟು ಭಾಗದಲ್ಲಿ ಸಮಾಸ್ಥಿತಿಯಲ್ಲಿ ಮಾಡಬೇಕು.

   ಅ) ಪ್ರತಿ ಹೆಜ್ಜೆಗೂ ಚೆಂಡನ್ನು ಎಸೆಯುತ್ತಾ, ಹಿಡಿಯುತ್ತಾ ಮುಂದುವರಿಯಬೇಕು.

   ಆ) ಆಸರೆಯಿಲ್ಲದೆ ಪಕ್ಕಕ್ಕೆ ನಡೆಯಬೇಕು.

   ಇ) ನೇರ ನಿಂತು ತೋಳುಗಳನ್ನು ಮೇಲೆತ್ತಬೇಕು ಮತ್ತು ಬಲಗಾಲನ್ನು ಪಕ್ಕಕ್ಕೆ ಎತ್ತಬೇಕು; ಮೊದಲ ಸ್ಥಿತಿಗೆ ಬರಬೇಕು; ಹೆಜ್ಜೆ ಮುಂದಿಡಬೇಕು. ತೋಳುಗಳನ್ನು ಮೇಲಕ್ಕೆ ಎತ್ತಬೇಕು. ಈಗ ಎಡಗಾಲನ್ನು ಪಕ್ಕಕ್ಕೆ ಎತ್ತಬೇಕು.

   ಈ) ಮೊಣಕಾಲುಗಳನ್ನು ಪೂರಾ ಮಡಚಿ ನಡೆಯಬೇಕು. ಮೂರು ಹೆಜ್ಜೆಗೆ ಒಮ್ಮೆ ಕಾಲನ್ನು ನೀಡಬೇಕು. ಮತ್ತೆ ಮಡಚಿ ಮುಂದುವರಿಯಬೇಕು.

5. ಈ ಕೆಳಗಿನ ಗುಂಪುಗಳಲ್ಲಿ ಒಂದನ್ನು ಮಾಡಬೇಕು.

   ಅ) 5 ಮೀ. ಹಗ್ಗ ಹತ್ತಬೇಕು. ಬಾರ್ ಮೇಲೆ ಪಕ್ಕಕ್ಕೆ ಹೋಗಬೇಕು ಅಥವಾ ಗೋಡೆಗೆ ಬಿಗಿಸಿರುವ ಬಾರ್ ಮೇಲೆ ಎರಡೂ ಕಡೆ ಹೋಗಬೇಕು. ಅಥವಾ ಬಾರ್ ಮೇಲೆ ಹಿಂದಕ್ಕೆ ಹೋಗಬೇಕು.

ಆ) ಆಸರೆ ಇಲ್ಲದೆ ಕೈಗಳ ಮೇಲೆ ನಿಲ್ಲಬೇಕು. ಅಥವಾ ಬಾರ್‌ನ ಕೆಳಗೆ ಅಥವಾ ಮೇಲೆ ಲಾಗಹಾಕಬೇಕು (ಬಾರ್ ಬದಲು ಸುಧಾರಿತ ಸಲಕರಣೆ ಆಗಬಹುದು) ಅಥವಾ ಎರಡು ಹಗ್ಗಗಳ ನಡುವೆ ಹಿಮ್ಮುಖ, ನೇರ ನೇತಾಡಬೇಕು.

## 29. ಕ್ಷೌರಿಕ (Hair Dresser)



1. ಕೂದಲು ಕತ್ತರಿಸಲು ಮತ್ತು ಷೇವ್ ಮಾಡಲು ತಿಳಿದಿರಬೇಕು ಮತ್ತು ಮಾಡುವಂತಿರಬೇಕು.
2. ಕೆಲಸದ ಜವಾಬ್ದಾರಿ ತಿಳಿದಿರಬೇಕು. ಹತ್ತಿರದ ಪಾರ್ಲರ್‌ಗೆ ಭೇಟಿ ನೀಡಿ, ವಿವಿಧ ರೀತಿಯ ಕೂದಲುಗಳಿಗೆ ಶ್ಯಾಂಪು ಮಾಡುವುದು; ಕೂದಲುಗಳಿಗೆ ನೀಡುವ ಉಪಚಾರ; ಮರ್ದನ ಮಾಡುವುದು; ಬಣ್ಣ ಹಚ್ಚುವುದು ಮುಂತಾದ ವಿಷಯಗಳ ಬಗ್ಗೆ ಮಾಹಿತಿಯನ್ನು ಕಲೆ ಹಾಕಬೇಕು.
3. ಸಾಂಸ್ಕೃತಿಕ ಸಮಾರಂಭಗಳ ವೇಳೆ ರೋವರ್‌ನ / ರೇಂಜರ್‌ಳ ಹೇರ್‌ಸ್ಟೈಲ್ ಬದಲು ಮಾಡಲು ಬರಬೇಕು ಮತ್ತು ಪರೀಕ್ಷಕರಿಗೆ ವರದಿ ಸಲ್ಲಿಸಬೇಕು.
4. ಕೂದಲಿಗೆ ರಂಗು ಹಾಕುವುದರ ವಿಧಾನವನ್ನು ತಿಳಿದಿರಬೇಕು ಮತ್ತು ಕನಿಷ್ಠ ಇಬ್ಬರ ಕೂದಲಿಗೆ ರಂಗು ಹಾಕಬೇಕು.

## 30. ಪರಂಪರೆ ರೋವರ್ (Heritage Rover)

ಕೆಳಗಿನ ವಿಷಯಗಳ ಬಗ್ಗೆ ತಿಳುವಳಿಕೆ ಮತ್ತು ಮಾಹಿತಿಗಳನ್ನೊಳಗೊಂಡ ದಾಖಲೆ ಪುಸ್ತಕ ಒಂದನ್ನು ಸಿದ್ಧಪಡಿಸಬೇಕು.




1. ಭಾರತದ ಭೌತಿಕ ಪರಿಸರ (ಪ್ರಸಿದ್ಧ ಪರ್ವತಗಳು, ನದಿಗಳು ಇತ್ಯಾದಿ) ಮತ್ತು ಸಾಮಾನ್ಯ ವೃಕ್ಷ ಸಂಪತ್ತು; ಸಾಮಾನ್ಯ ಗಿಡಗಳು ಮತ್ತು ಅವುಗಳ ಉಪಯೋಗ ಸಾಮಾನ್ಯ ಪಕ್ಷಿಗಳು
   ಅಪರೂಪದ ಪ್ರಾದೇಶಿಕ ಸಸ್ಯ ಮತ್ತು ಪ್ರಾಣಿ ವರ್ಗ
   ಋತುಗಳು ಮತ್ತು ಹಬ್ಬಗಳು ಹಾಗೂ ಅವುಗಳ ಅರ್ಥ ಮತ್ತು ವೈಶಿಷ್ಟ್ಯತೆ.

ರೋವರ್‌ಗಳ ಕುಟುಂಬಗಳು ಮತ್ತು ಆಚರಣೆಗಳು,

ಕೌಟುಂಬಿಕ ಸಂಪ್ರದಾಯಗಳು ಮತ್ತು ತತ್ಸಂಬಂಧ ಹಬ್ಬಗಳು ಹಾಗೂ ಋತುಗಳು

ಸ್ಥಳೀಯ ಭಾಷೆಯ ಜಾನಪದ ಹಾಡುಗಳು ಮತ್ತು ಗೀತೆಗಳು.

2. ಭಾರತದ ಕಲೆ ಸಂಸ್ಕೃತಿ ಮತ್ತು ಪರಂಪರೆ ಇವುಗಳ ಬಗ್ಗೆ ಮೂಲ ತಿಳುವಳಿಕೆಯನ್ನು ಪಡೆದಿರಬೇಕು.

3. ಭಾರತೀಯ ಕಲೆ ಮತ್ತು ವಿಶ್ವವಿಖ್ಯಾತ ವಾಸ್ತುಶಿಲ್ಪ ಶೈಲಿ ಮತ್ತು ಶಿಲ್ಪಕೃತಿಗಳು, ಪೂಜಾ ಮಂದಿರಗಳು, ಸಂಗೀತ, ನೃತ್ಯ, ನಾಟಕಗಳ ವೈವಿಧ್ಯ ಮತ್ತು ಸಾಹಿತ್ಯ ಮತ್ತು ಪ್ರಖ್ಯಾತ ಸಾಹಿತಿಗಳ ಮತ್ತು ಕವಿಗಳ ಬಗ್ಗೆ ತಿಳಿದಿರಬೇಕು.

4. **ಪ್ರಾಯೋಗಿಕ ಕಾರ್ಯ**: ಈ ಕೆಳಗಿನ ಕಾರ್ಯಕ್ರಮಗಳಲ್ಲಿ ಯಾವುದಾದರೂ **ನಾಲ್ಕನ್ನು** ಆಯ್ದುಕೊಳ್ಳಿ.

   ಅ) ಐವರು ಸ್ಥಳೀಯರಿಗೆ ಭಾರತದ ಕಲೆ, ಸಂಸ್ಕೃತಿ, ಧರ್ಮ ಮತ್ತು ಸಾಮಾಜಿಕ ಪ್ರಗತಿ ಇವುಗಳ ಮೇಲೆ ಶಿಕ್ಷಣ ನೀಡಬೇಕು ಮತ್ತು ವಿದೇಶಗಳಲ್ಲಿ ಇವುಗಳ ಪ್ರಭಾವದ ಬಗ್ಗೆ ತಿಳಿದಿರಬೇಕು.

   ಆ) ಕಲೆ, ಪ್ರಾಚೀನ ಅವಶೇಷಗಳು ಮತ್ತು ಸ್ಮಾರಕಗಳು ಇವುಗಳನ್ನು ನೋಡಿಕೊಳ್ಳುವ ಕಾರ್ಯನಿರ್ವಹಿಸುವ ಸರ್ಕಾರಿ ಇಲಾಖೆಗಳು ಮತ್ತು ಸರ್ಕಾರೇತರ ಸಂಸ್ಥೆಗಳ ಬಗ್ಗೆ ತಿಳಿದಿರಬೇಕು ಮತ್ತು ಅವುಗಳ ಬಗ್ಗೆ ಸಂಕ್ಷಿಪ್ತ ವರದಿಯನ್ನು ತಯಾರಿಸಬೇಕು.

   ಇ) ಸಾಂಸ್ಕೃತಿಕ ಪರಂಪರೆ ವಿಷಯಕ್ಕೆ ಸಂಬಂಧಿಸಿದಂತೆ ಕನಿಷ್ಠ ಒಂದು ಸ್ಪರ್ಧೆ/ ವಸ್ತು ಪ್ರದರ್ಶನ/ ರಸಪ್ರಶ್ನೆ ಕಾರ್ಯಕ್ರಮವನ್ನು ಏರ್ಪಡಿಸಬೇಕು.

   ಈ) ದೇಶದಲ್ಲಿ ಕಾಡುಪ್ರಾಣಿಗಳ ಸಾಂಧ್ರತೆ ಇರುವ ಪ್ರದೇಶಗಳನ್ನು ಗುರುತಿಸಿ ಪ್ರಬಂಧವನ್ನು ತಯಾರಿಸಬೇಕು.

   ಉ) ಪ್ರಾಚೀನ ಸ್ಥಳ ಅಥವಾ ಸ್ಮಾರಕವನ್ನು ದತ್ತಕ ಮಾಡಿಕೊಂಡು ಎರಡು ತಿಂಗಳ ಕಾಲ ನೋಡಿಕೊಂಡು ಅದರ ಏಳಿಗೆಗೆ ಸಹಾಯಕವಾಗುವ ರೀತಿಯಲ್ಲಿ ವರದಿಯೊಂದನ್ನು ಸಲ್ಲಿಸಬೇಕು.

ಊ) ಸ್ಥಳೀಯ ಶಾಲೆ ಮತ್ತು ಸಮಾಜದ ಸದಸ್ಯರಿಗೆ ಮಾರ್ಗದರ್ಶಿ ಆಗಿ ಸೇವೆ ಸಲ್ಲಿಸುವ ರೀತಿಯಲ್ಲಿ ಸ್ಮಾರಕಗಳ ಬಗ್ಗೆ ತಿಳಿದುಕೊಂಡು ಅಂತಹ ಯಾವುದಾದರೊಂದು ಸ್ಥಳಕ್ಕೆ ಕನಿಷ್ಠ ಒಂದು ಗುಂಪನ್ನು ಕರೆದುಕೊಂಡು ಹೋಗಬೇಕು.

**31. ಮಾಹಿತಿ ತಂತ್ರಜ್ಞಾನ (Information Technology)**



1. ಕೆಲಸ ಮಾಡುವ ಕ್ರಮಗಳು (Operating Systems) ಮತ್ತು ಅವುಗಳ ಪರಿಕಲ್ಪನೆ ತಿಳಿದಿರಬೇಕು.
2. ಮಾಹಿತಿಯನ್ನು ಜೋಪಾನ ಮಾಡುವ/ ಕಾದಿರಿಸುವ ಮತ್ತು ವರ್ಗೀಕರಿಸುವ ಬಗ್ಗೆ ತಿಳಿದಿರಬೇಕು.
3. ಈ ಕೆಳಗಿನ ಸಾಫ್ಟ್‌ವೇರ್ ಬಗ್ಗೆ ವ್ಯಾವಹಾರಿಕ ಜ್ಞಾನವಿರಬೇಕು. ಫೋಟೋಷಾಪ್ ಅಥವಾ ಕೋರಲ್ ಡ್ರಾ.
4. ಮಾಹಿತಿ ಮೂಲದ (Data Base) ವಿವಿಧ ಕಾರ್ಯಗಳನ್ನು ಪಟ್ಟಿ ಮಾಡಬೇಕು.
5. ಕನಿಷ್ಠ 10 ವೆಬ್‌ಸೈಟ್‌ಗಳು ತಿಳಿದಿರಬೇಕು ಮತ್ತು ಅದರ ಉಪಯೋಗಗಳನ್ನು ತಿಳಿದಿರಬೇಕು.
6. ನಿಮ್ಮ ತಂಡದ ಸದಸ್ಯರು ಅವರವರ ಈ-ಮೈಲ್ ಐಡಿ ಇಟ್ಟುಕೊಂಡು ಅವರದೇ ಮೈಲ್ ರಚಿಸಲು ಒಪ್ಪಿಸಬೇಕು.
7. "ದೂರ ಸಂವಹನ ಮಾಧ್ಯಮ"ವನ್ನು ವಿವಿಧ ಉದಾಹರಣೆಗಳಸಹಿತ ವಿವರಿಸಬೇಕು.
8. ಮೈಕ್ರೋಸಾಫ್ಟ್ ತಂತ್ರಜ್ಞಾನದವರ ಇತ್ತೀಚಿನ ಕಾರ್ಯಕ್ರಮವನ್ನೂ, ಅದರ ಲಕ್ಷಣಗಳನ್ನೂ ವಿವರಿಸಬೇಕು.
9. ಅಂತರ್ಜಾಲದ ಉಪಯೋಗವನ್ನು ಪ್ರದರ್ಶಿಸಬೇಕು ಮತ್ತು ಅದರ ಪ್ರಾಮುಖ್ಯತೆಯನ್ನು ವಿವರಿಸಬೇಕು.
10. ಅಂತರ್ಜಾಲದಲ್ಲಿ ವಿವಿಧ ರೀತಿಯ ಪ್ರೋಟೋಕಾಲ್‌ಗಳನ್ನು ಪಟ್ಟಿಮಾಡಿ, ಅದನ್ನು ಪರೀಕ್ಷಕರಿಗೆ ಒಪ್ಪಿಸಬೇಕು.

### 32. ಪತ್ರಕರ್ತ (Journalist)



1. ಕನಿಷ್ಠ 2 ಪುಟಗಳಿರುವ, ಗುಂಪು/ಸ್ಥಳೀಯ/ಜಿಲ್ಲಾ ಸಂಸ್ಥೆಯ ಚಟುವಟಿಕೆಗಳ ವರದಿಯನ್ನು ತಾನೇ ತಯಾರಿಸಿ ಒಪ್ಪಿಸಬೇಕು.
2. ಈ ಕೆಳಗಿನವುಗಳಲ್ಲಿ ಯಾವುದಾದರೊಂದು ವರದಿಯನ್ನು ತಯಾರಿಸುವಂತಿರಬೇಕು. ಉಪನ್ಯಾಸ/ಭಾಷಣ; ಚರ್ಚೆ/ವಿಚಾರಗೋಷ್ಠಿ; ಔತಣಕೂಟ/ಮೇಳ.
3. 6 ಸಂದರ್ಭಗಳಲ್ಲಿ ಬರಹಗಾರನಾಗಿ ಕೆಲಸ ಮಾಡಿರಬೇಕು.
4. ಪರೀಕ್ಷಕನಿಗೆ ಒಪ್ಪಿಗೆ ಆಗುವ ರೀತಿಯಲ್ಲಿ ಭಾಷಣ ಅಥವಾ ವರದಿಯನ್ನು ಮುದ್ರಣಕ್ಕಾಗಿ ಸಿದ್ಧಪಡಿಸಿ ಒಪ್ಪಿಸಬೇಕು.
5. (ವಾರ್ತಾ) ಪತ್ರಿಕೆ ಅಥವಾ (ವಾರ/ಮಾಸ) ಪತ್ರಿಕೆಯ ಸಂಪಾದಕ ಸಿಬ್ಬಂದಿಯಾಗಿ, ಕನಿಷ್ಠ 6 ತಿಂಗಳು ಕೆಲಸ ಮಾಡಿರಬೇಕು.
6. ಮುದ್ರಕರ ತಿದ್ದುಪಡಿ ಚಿಹ್ನೆಗಳನ್ನು ಅರ್ಥಮಾಡಿಕೊಂಡಿರಬೇಕು ಮತ್ತು ಒಂದು ಪುಸ್ತಕ ಅಥವಾ (ವಾರ/ಮಾಸ) ಪತ್ರಿಕೆಯ ಕರಡುಪ್ರತಿ ತಿದ್ದಿರಬೇಕು. ಅದನ್ನು ಪರೀಕ್ಷಕರಿಗೆ ಒಪ್ಪಿಸಬೇಕು.
7. ಗುಂಪಿನ ಪ್ರಮುಖ ಕಾರ್ಯಕ್ರಮವೊಂದರ "ಪತ್ರಿಕಾ ವರದಿ"ಯನ್ನು ತಯಾರಿಸಿ, ಅದನ್ನು ಯಾವುದಾದರೂ ವಾರ್ತಾ ಪತ್ರಿಕೆಯಲ್ಲಿ ಪ್ರಕಟಪಡಿಸಿರಬೇಕು.

### 33. ಸಾಕ್ಷರತೆ (Literacy)

1. ಗ್ರಾಮದಲ್ಲಿ/ಸ್ಥಳೀಯವಾಗಿ ವಯಸ್ಕರಿಗಾಗಿ ಶಿಕ್ಷಣಾ ಆಂದೋಲನವನ್ನು ಸಂಘಟಿಸಬೇಕು.
2. ಸರ್ವೇಕ್ಷಣೆ ನಡೆಸಿ, ಪ್ರಾದೇಶಿಕವಾಗಿ ಯಾವುದೇ ಹೆಣ್ಣುಮಗು ಶಿಕ್ಷಣದಿಂದ ವಂಚಿತವಾಗದಂತೆ ತಂದೆತಾಯಿಯರನ್ನು ಪ್ರಚೋದಿಸಬೇಕು.




3. ವಯಸ್ಕರಿಗೆ / ಶಾಲೆಯನ್ನು ತೊರೆದವರಿಗೆ ರಾತ್ರಿ ಶಾಲೆಯನ್ನು ತೆರೆಯಬೇಕು ಅಥವಾ ತೆರೆಯಲು ಸಹಾಯ ಮಾಡಬೇಕು.

4. ಕನಿಷ್ಠ 10 ಅನಕ್ಷರಸ್ಥರಿಗೆ ಮೂರು 'ಆರ್'ಗಳನ್ನು (Reading, Writing and Arithmatic) ಓದುವುದು, ಬರೆಯುವುದು, ಗಣಿತ. ಕಲಿಸಬೇಕು.

   ಅಥವಾ 10 ಮಕ್ಕಳಿಗೆ ಅವರ ಓದಿನಲ್ಲಿ ಸಹಾಯ ಮಾಡಬೇಕು.

5. ವಯಸ್ಕರ ಸಾಕ್ಷರತಾ ಆಂದೋಲನ ಮತ್ತು ಹೆಣ್ಣುಮಕ್ಕಳ ಶಿಕ್ಷಣದ ಬಗ್ಗೆ ಪ್ರಚೋದಿಸುವ ರೀತಿಯಲ್ಲಿ ಕನಿಷ್ಠ 10 ಭಿತ್ತಿಚಿತ್ರಗಳನ್ನು ಸಿದ್ಧಪಡಿಸಬೇಕು.

6. ಸರ್ಕಾರ ಮತ್ತು ಸರ್ಕಾರೇತರ ಸಂಸ್ಥೆಗಳಿಂದ ಪ್ರಕಟಗೊಂಡ ಭಿತ್ತಿಪತ್ರ ಮತ್ತು ಮತ್ತಿತರ ವಸ್ತುಗಳೊಂದಿಗೆ ವಸ್ತುಪ್ರದರ್ಶನವನ್ನು ಏರ್ಪಡಿಸಬೇಕು.

7. ಸ್ಥಳೀಯವಾಗಿ ಸಾಕ್ಷರತಾ ಆಂದೋಲನದ ಬಗ್ಗೆ ಕಿರುಪ್ರಹಸನ/ ಬೀದಿನಾಟಕವನ್ನು ಏರ್ಪಡಿಸಬೇಕು.

**34. ರೂಪದರ್ಶಕತೆ (Modelling)**



1. ಚರ್ಮವು ನಿರ್ಮಲವಾಗಿ, ಕಾಂತಿಯುತವಾಗಿರಲು ಗಮನ ಹರಿಸಬೇಕು. ಕೂದಲು ಆರೋಗ್ಯಕರವಾಗಿ, ಹೊಳಪಿನಿಂದ ಕೂಡಿರುವುದು ಮುಖ್ಯವಾದುದು. ಆರೋಗ್ಯ (ದೃಢಕಾಯ)ನಾಗಿ ಇರುವುದೂ ಮುಖ್ಯವೇ. ಈ ದಿಕ್ಕಿನಲ್ಲಿ ನಿಮ್ಮ ವಿಕಾಸವನ್ನು ತೋರಿಸಬೇಕು.

2. ನೀವು ಯಾವ ರೀತಿಯ ರೂಪದರ್ಶಿ ಆಗಬೇಕು ಎಂಬುದನ್ನು ನಿರ್ಧರಿಸಬೇಕು.

3. 2 ವಾರ ಕಾಲ ರೂಪದರ್ಶಿಗಳ ಕಾರ್ಯಾಲಯ/ ಸಂಸ್ಥೆಯನ್ನು ದರ್ಶಿಸಬೇಕು. ರೂಪದರ್ಶಿ ಆಗಿ ನಾಲ್ಕಾರು ಫೋಟೊ ತೆಗೆಸಿಕೊಳ್ಳಬೇಕು.

4. ಕಸುಬುದಾರನಂತಿರಬೇಕು; ಸಭ್ಯನಾಗಿರಬೇಕು; ವಿನಯವಂತನಾಗಿರಬೇಕು.

5. ಫೋಟೋಗ್ರಾಫರ್‌ಗಳೊಡನೆ ಮೈತ್ರಿ ಬೆಳೆಸಿಕೊಳ್ಳಬೇಕು; ರೂಪದರ್ಶಕತೆಯನ್ನು ಹುಟ್ಟು ಕಸುಬಿನಂತೆ ಭಾವಿಸಬೇಕು. ನಿಮ್ಮ "ವೃತ್ತಿ ಪರಿಚಯ" ಪತ್ರವನ್ನು ಕನಿಷ್ಠ 100 ಫೋಟೊಗಳಿಂದ ತಯಾರಿಸಬೇಕು.

6. ಸ್ಥಳೀಯ/ಕಾಲೇಜು ಮಟ್ಟದಲ್ಲಿ ರೂಪದರ್ಶಿ ಸ್ಪರ್ಧೆ/ ವಸ್ತ್ರ ವಿನ್ಯಾಸ ಪ್ರದರ್ಶನವನ್ನು ಏರ್ಪಡಿಸಬೇಕು.

**35. ವಾಹನಕರ್ಮಿ (Motor Mechanic)**



1. ಅಂತರ್ದಹನ ಎಂಜಿನ್‌ನ ಕ್ರಿಯೆ ಹಾಗೂ ಅದರ ಭಾಗಗಳ ಹೆಸರು ಮತ್ತು ಕಾರ್ಯಗಳನ್ನು ತಿಳಿದಿರಬೇಕು.

2. ಈ ಕೆಳಕಂಡ ಅಂಶಗಳನ್ನು ಪ್ರದರ್ಶಿಸುವ ಸಾಮರ್ಥ್ಯವಿರಬೇಕು.

   i) ವಾಹನದ ಅಡಿಕಟ್ಟಿನ ಭಾಗಗಳಿಗೆ ಎಣ್ಣೆ ಮತ್ತು ಗ್ರೀಸ್ ಹಾಕುವುದು; ಗೇರ್‌ಪೆಟ್ಟಿಗೆಗೆ ಎಣ್ಣೆ ಹಾಕುವುದು ಮತ್ತು ಹಿಂಭಾಗದ ಅಚ್ಚಿಗೆ ಎಣ್ಣೆ ಹಾಕುವುದು.

   ii) ವಿದ್ಯುತ್ ಕೋಶದ (ಬ್ಯಾಟರಿ) ನೀರನ್ನು ಬದಲಾಯಿಸುವುದು.

   iii) ಬ್ರೇಕ್‌ಗಳನ್ನು ಸರಿಪಡಿಸುವುದು.

   iv) ಕಾರಿನ ಚಕ್ರವನ್ನು ಬದಲಾಯಿಸುವುದು.

   ವಿದ್ಯುತ್ ಕಿಡಿಯ ಅವಧಿಯನ್ನು (ಇಗ್ನಿಷನ್ ಟೈಂ) ಪರೀಕ್ಷಿಸುವುದು. ವಿದ್ಯುತ್ ಕಿಡಿ ಬೆಣೆ (ಸ್ಪಾರ್ಕ್‌ಪ್ಲಗ್)ಯನ್ನು ಸ್ವಚ್ಛಗೊಳಿಸುವುದು.

   v) ಕಾರ್ಬೋರೇಟರನ್ನು ಬಿಚ್ಚಿ ತೆಗೆದು, ಸ್ವಚ್ಛಗೊಳಿಸಿ, ಪುನಃ ಜೋಡಿಸುವುದು.

3. ಪೆಟ್ರೋಲ್ ಬಳಕೆಯನ್ನು, ಕಿಲೋ ಮೀಟರುಗಳಲ್ಲಿ ಹೇಗೆ ದಾಖಲಿಸಬೇಕು ಎಂಬುದನ್ನು ಕಾಣಿಸಬೇಕು.

4. ಚಾಲನೆ ಆಗದ ಕಾರನ್ನು ಸಕ್ರಮವಾಗಿ ಪರೀಕ್ಷಿಸಿ, ಅದರ ದೋಷವನ್ನು ಪತ್ತೆ ಮಾಡಬೇಕು.

5. ಡ್ರೈವಿಂಗ್ ಲೈಸೆನ್ಸ್ ಹೊಂದಿರಬೇಕು ಮತ್ತು ಕಾರನ್ನು ಕನಿಷ್ಠ 50 ಕಿ.ಮೀ. ಓಡಿಸಬೇಕು.

### 36. ವ್ಯಕ್ತಿತ್ವ ವಿಕಾಸ (Personality Development)



1. ಹಿತಕರವಾದ ಶಿಷ್ಟಾಚಾರಗಳು (Manners) ವಿಶೇಷ ಗುಣಗಳು (Traits) ಕೌಶಲಗಳು (Skills) ಪಟ್ಟುಹಿಡಿದು ಕೆಲಸ ಮಾಡುವುದು (Perseverance) ತಾಳ್ಮೆ (Tolerance) ಮತ್ತು ವಿಶ್ವಾಸ (Confidance) ಇವೇ ಗುಣಗಳನ್ನು ರೋವರ್/ರೇಂಜರ್‌ಗಳು ರೂಢಿಸಿಕೊಳ್ಳಬೇಕು.
2. ವ್ಯಕ್ತಿತ್ವ ವಿಕಾಸಕ್ಕೆ ಅವಶ್ಯಕವಾದ ವಿಷಯಗಳನ್ನು ತಿಳಿದಿರಬೇಕು ಮತ್ತು ನಿಮ್ಮ ಪ್ರಗತಿಯನ್ನು ಕಾಣಿಸಬೇಕು.
3. ಉತ್ತಮ ಸಂವಹನ (Communication) ಕೌಶಲಗಳನ್ನು ಹೊಂದಿರಬೇಕು.
4. ನಿಮ್ಮ ತಂಡದ, ಕನಿಷ್ಠ 5 ಸದಸ್ಯರಿಗೆ ಅವರ ವ್ಯಕ್ತಿತ್ವ ವಿಕಾಸ ಕ್ರಿಯೆಯಲ್ಲಿ ಸಹಾಯ ಮಾಡಿರಬೇಕು.

### 37. ಛಾಯಾಚಿತ್ರ ಗ್ರಾಹಕ (Photo Grapher)



1. ಎಂಟು ಬೇರೆ ಬೇರೆ ವಿಷಯಗಳ ಛಾಯಾಚಿತ್ರ ಗಳನ್ನು ತೆಗೆದು, ತೊಳೆದು, ಪ್ರಿಂಟ್ ಮಾಡಬೇಕು. ಅವುಗಳಲ್ಲಿ 2 ಒಳಾಂಗಣ; 2 ಭೂದೃಶ್ಯಗಳು ಮತ್ತೆರಡು ತಕ್ಷಣ ತೆಗೆದ ಛಾಯಾಚಿತ್ರಗಳಾಗಿರಬೇಕು.
2. ಮಸೂರ (Lense)ಗಳ ತತ್ವ ಮತ್ತು ಉಪಯೋಗ ತಿಳಿದಿರಬೇಕು. ಡಿಜಿಟಲ್ ಕ್ಯಾಮರಾಗಳ ರಚನೆ ಮತ್ತು ತೊಳೆಯುವ ರಾಸಾಯನಿಕ ಕ್ರಿಯೆ ತಿಳಿದಿರಬೇಕು.
3. ರೋವರ್/ರೇಜರ್‌ಗಳ ಚಟುವಟಿಕೆಗಳು ಮತ್ತು ಪ್ರಕೃತಿ ದೃಶ್ಯಗಳನ್ನು ಒಳಗೊಂಡ ಸಾಫ್ಟ್ ಕಾಪಿಗಳ ಅಥವಾ ಹಾರ್ಡ್ ಕಾಪಿಗಳಿರುವ ಚಿತ್ರಗಳ ಆಲ್ಬಂ ತಯಾರಿಸಬೇಕು.

4. ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್‌ನ ಸ್ಥಳೀಯ / ಜಿಲ್ಲಾ/ ರಾಜ್ಯ ಅಥವಾ ರಾಷ್ಟ್ರೀಯ ಘಟನೆಯೊಂದರಲ್ಲಿ ಛಾಯಾಚಿತ್ರ ಗ್ರಾಹಕನಾಗಿ ಕೆಲಸ ಮಾಡಿರಬೇಕು.

**38. ಮಾಲಿನ್ಯ ನಿರೋಧ (Pollution Control)**

1. ವಿವಿಧ ರೀತಿಯ ಮಾಲಿನ್ಯತೆ ಮತ್ತು ಅವುಗಳನ್ನು ತಡೆಗಟ್ಟುವ ಬಗ್ಗೆ ತಿಳಿದಿರಬೇಕು.



2. ಮಾಲಿನ್ಯ ನಿರೋಧ ಕಾರ್ಯದಲ್ಲಿ ತೊಡಗಿರುವ ಸರ್ಕಾರಿ ಇಲಾಖೆಗಳು, ಸರ್ಕಾರೇತರ ಸಂಸ್ಥೆಗಳು ಮತ್ತು ಅಂತಾರಾಷ್ಟ್ರೀಯ ಸಂಸ್ಥೆಗಳ ಬಗ್ಗೆ ತಿಳಿದಿರಬೇಕು.
3. ಮಾಲಿನ್ಯ ಸಮಸ್ಯೆಗೆ ಸಂಬಂಧಪಟ್ಟಂತೆ 20 ಕೂಗುಗಳ (Slogans) ಭಿತ್ತಿಪತ್ರಗಳನ್ನು ತಯಾರಿಸಬೇಕು.
4. ಸ್ಥಳೀಯವಾಗಿ ಮಾಲಿನ್ಯ ನಿರೋಧ ಸಪ್ತಾಹವನ್ನು ಸಂಘಟಿಸಬೇಕು.
5. ಶಾಲೆ/ ನಿಮ್ಮ ನೆರೆಹೊರೆಯಲ್ಲಿ ಮಕ್ಕಳಿಗೆ, ಮಾಲಿನ್ಯ ನಿರೋಧದ ಬಗ್ಗೆ ಬೋಧಕ ಪ್ರದವಾದ ರಸಪ್ರಶ್ನೆ ಕಾರ್ಯಕ್ರಮವನ್ನು ಏರ್ಪಡಿಸಬೇಕು.

**39. ಜನಸಂಖ್ಯಾ ಶಿಕ್ಷಣ (Population Education)**

1. ಜನರಿಗೆ ಕೆಳಕಂಡ ಅಂಶಗಳ ಬಗ್ಗೆ ಶಿಕ್ಷಣ ನೀಡಬೇಕು.
   a) ಮಗುವಿನ ಹಕ್ಕು ಬಾಧ್ಯತೆಗಳು
   b) ಹೆಚ್ಚು ಮಕ್ಕಳನ್ನು ಪಡೆಯುವುದರಿಂದ ಆಗುವ ದುಷ್ಪರಿಣಾಮಗಳು.

      i) ಮಕ್ಕಳ ಮೇಲೆ ii) ತಾಯಂದಿರ ಮೇಲೆ iii) ಕುಟುಂಬಗಳ ಮೇಲೆ iv) ಸಮುದಾಯದ ಮೇಲೆ



   c) ಜನಸಂಖ್ಯಾ ಸ್ಫೋಟದಿಂದ ರಾಷ್ಟ್ರಕ್ಕೆ ಉಂಟಾಗುವ ಸಮಸ್ಯೆಗಳು

2. ಕುಟುಂಬ ಕಲ್ಯಾಣ ಕಾರ್ಯಕ್ರಮವನ್ನು ಒಪ್ಪಿಕೊಳ್ಳುವಂತೆ ಐದು ಜನರಿಗೆ ಪ್ರಚೋದನೆ ನೀಡಬೇಕು.

3. ಸ್ಥಳೀಯವಾಗಿ, ಅವಶ್ಯಕತೆ ಇರುವ ಕಡೆ ಕುಟುಂಬ ಯೋಜನಾ ಕಾರ್ಯಕ್ರಮವನ್ನು ಸಂಚಾಲನೆ ಮಾಡಬೇಕು.

4. ವಿಶ್ವಸಂಸ್ಥೆಯಿಂದ ಸಂಬಂಧಪಟ್ಟ ವಿಷಯದ ಬಗ್ಗೆ ಪ್ರಕಟಗೊಂಡ ಭಿತ್ತಿಪತ್ರಗಳ ವಸ್ತು ಪ್ರದರ್ಶನವನ್ನು ಏರ್ಪಡಿಸಬೇಕು.

**40. ಸಾರ್ವಜನಿಕ ಭಾಷಣಕಾರ (Public Speaker)**



1. ಸಾರ್ವಜನಿಕವಾಗಿ ಭಾಷಣ ಮಾಡುವಾಗ ಗಮನಿಸಬೇಕಾದ ಮುಖ್ಯ ಅಂಶಗಳನ್ನು ಪಟ್ಟಿಮಾಡಬೇಕು. ನೀವು ಉದ್ದೇಶಿಸಿ ಮಾತನಾಡಲಿರುವ ಶ್ರೋತೃಗಳ ಮಟ್ಟವನ್ನು ತಿಳಿಯುವಂತಿರಬೇಕು.

2. ಈ ಕೆಳಕಾಣಿಸಿರುವ ಯಾವುದೇ 5 ವಿಷಯಗಳ ಬಗ್ಗೆ ನಿಮ್ಮ ಭಾಷಣವನ್ನು ಬರೆದು ತಯಾರಿಸಬೇಕು.

   i) ಸಾಮಾಜಿಕ ಸಮಸ್ಯೆಗಳು (ವರದಕ್ಷಿಣೆ/ ಹೆಣ್ಣು ಶಿಶುಗಳ ಭ್ರೂಣಹತ್ಯೆ/ ಕೋಮು ಗಲಭೆಗಳು)

   ii) ಪರಿಸರ ಸಂಬಂಧ ಸಮಸ್ಯೆಗಳು

   iii) ನಮ್ಮ ದೇಶದ/ ವಿಶ್ವದ ರಾಜಕೀಯ ಮಹಾನಾಯಕರುಗಳು

   iv) ಮಕ್ಕಳ ಸಂಬಂಧ ಸಮಸ್ಯೆಗಳು (ಬಾಲಕಾರ್ಮಿಕರು/ ಮಕ್ಕಳನ್ನು ದುರುಪಯೋಗಪಡಿಸುವುದು/ಬಾಲ ವಿವಾಹಗಳು)

   v) ಭಾರತದ ಸಾಂಸ್ಕೃತಿಕ ವಿಭಿನ್ನತೆ

   vi) ನಮ್ಮ ದೇಶದಲ್ಲಿ ಮಾಧ್ಯಮಗಳ ಪಾತ್ರ

   vii) ಪರಮತ ಸಹಿಷ್ಣುತೆ

   viii) ಜೀವನೋಪಾಯ ಅಭಿವೃದ್ಧಿ

3. ನೀವು ಆರಿಸಿಕೊಂಡ ಯಾವುದೇ ವಿಷಯದ ಬಗ್ಗೆ 10 ನಿಮಿಷ ಕಾಲ ಒಂದು ಗುಂಪು ಶ್ರೋತೃಗಳನ್ನುದ್ದೇಶಿಸಿ ಮಾತನಾಡಬೇಕು.

4. ಪರೀಕ್ಷಕರು ನೀಡಿದ ಯಾವುದೇ ವಿಷಯದ ಬಗ್ಗೆ ಸಭಿಕರನ್ನುದ್ದೇಶಿಸಿ 15 ನಿಮಿಷಗಳ ಕಾಲ ಮಾತನಾಡಬೇಕು.

**41. ಅಲೆಮಾರಿ (Rambler)**

1. ಕೆಳಗಿನ ಸ್ಕೌಟ್ ಪ್ರವೀಣತಾ ಪದಕಗಳ* ಪರೀಕ್ಷಾಂಶಗಳ ವಿಷಯಗಳನ್ನು ಸ್ಕೌಟ್‌ಗಳಿಗೆ ತಿಳಿಸಿಕೊಡುವ ಸಾಮರ್ಥ್ಯವನ್ನು ಸಂಪಾದಿಸಿಕೊಂಡು, ಕನಿಷ್ಠ ಒಬ್ಬ ಸ್ಕೌಟ್ ತರಬೇತಿ ಹೊಂದಿದ ಬಗ್ಗೆ ಸಾಬೀತುಪಡಿಸಬೇಕು.



* **ಶಿಬಿರವಾಸಿ, ಆರೋಹಿ, ಅನ್ವೇಷಕ, ಹೊರಸಂಚಾರಿ, ಅಗ್ರಗಾಮಿ.**

2. ಸ್ಕೌಟ್‌ನ ಚರಶಿಕ್ಷಕ ಪದಕ ಮಟ್ಟದ ಪ್ರಥಮ ಚಿಕಿತ್ಸಾ ಪರೀಕ್ಷಾಂಶಗಳಲ್ಲಿ ಕಡ್ಡಾಯವಾಗಿ ಉತ್ತೀರ್ಣರಾಗಬೇಕು.

3. ಮೊತ್ತದಲ್ಲಿ 161 ಕಿ.ಮೀ. (100 ಮೈಲಿಗಳು) ದೂರವನ್ನು ಕಾಲ್ನಡಿಗೆಯಲ್ಲಿ ಅಥವಾ ಹಾಯಿದೋಣಿ ಅಥವಾ ದೋಣಿಯಲ್ಲಿ ಹುಟ್ಟುಹಾಕಿ ತೇಲುತ್ತಾ ಕ್ರಮಿಸಬೇಕು ಅಥವಾ 644 ಕಿ.ಮೀ. (400 ಮೈಲಿ) ದೂರವನ್ನು ಸೈಕಲ್ ತುಳಿದು ಕ್ರಮಿಸಬೇಕು. ಪಟ್ಟಣದ ಹೊರವಲಯದಲ್ಲಿ ವಾರಾಂತ್ಯ ಅಥವಾ ರಜಾದಿನಗಳಲ್ಲಿ ಚಾರಣವನ್ನು ಕೈಗೊಂಡು, ಒಟ್ಟು 161 ಮೈಲಿ (ಕಾಲ್ನಡಿಗೆ/ಹುಟ್ಟುಹಾಕಿ) ಅಥವಾ 644 ಕಿ.ಮೀ. (ಸೈಕಲ್ ಮೇಲೆ) ದೂರವನ್ನು ಸಂಪೂರ್ಣಗೊಳಿಸಿದ ನಂತರ ಪ್ರವಾಸ ವರದಿಯನ್ನು ಸಲ್ಲಿಸಬೇಕು. ಈ ವರದಿಯು ದಿನಾಂಕ, ಸ್ಥಳ ಮತ್ತು ದೂರ ಹಾಗೂ ಇತರ ಚಾರಣ ಆಸಕ್ತರಿಗೆ ರಸ್ತೆಯಲ್ಲಿ ಸಿಗುವಂತಹ ಪ್ರೇಕ್ಷಣೀಯ ಸ್ಥಳಗಳು, ಶಿಬಿರ ಹೂಡಲು ಒಳ್ಳೆಯ ಸ್ಥಳಗಳು, ಛತ್ರ ಮತ್ತು ಧರ್ಮಶಾಲೆಗಳು, ದುರ್ಗಮ ಪ್ರದೇಶಗಳಲ್ಲಿ ಮಾರ್ಗದರ್ಶನದ ಮಾಹಿತಿ, ದೋಣಿಯಲ್ಲಿ ಜಲಮಾರ್ಗದ ಮಾಹಿತಿಯೊಡನೆ ಬಂದರು, ರೇವುಗಳು ಮತ್ತಿತರ ಉಪಯುಕ್ತ ಮಾಹಿತಿಗಳು, ಒಳನಾಡ ಜಲಮಾರ್ಗ ಇತ್ಯಾದಿಗಳು ರೇಖಾಚಿತ್ರದ ನಕಾಶೆಗಳು ಹಾಗೂ ನಿಸರ್ಗದ ವಿವರಗಳನ್ನು ಒಳಗೊಂಡಿರಬೇಕು.

### 42. ಶಿಲಾರೋಹಿ (Rock Climber)

1. 16 ವರ್ಷ ವಯಸ್ಸು ಮುಗಿದಿರಬೇಕು.



2. ಉಪಯೋಗಿಸುವ ಸಲಕರಣೆ ಮತ್ತು ತಂತ್ರೋಪಾಯಗಳೂ ಸೇರಿದಂತೆ ವಿವಿಧ ರೀತಿಯ ಶಿಲಾರೋಹಣದ ಬಗ್ಗೆ ತಿಳಿದವರಾಗಿ, ದಾಖಲಾತಿ ಬರೆಯಬೇಕು.
3. ತುರ್ತು ಸಂದರ್ಭಗಳಲ್ಲಿ ಅದನ್ನು ತಿಳಿಸುವ ಸಂಪರ್ಕ ಮಾಧ್ಯಮವನ್ನು ತಿಳಿದಿರಬೇಕು.
4. ತುರ್ತು ಸಂದರ್ಭಗಳಲ್ಲಿ ಪ್ರಥಮ ಚಿಕಿತ್ಸೆ ಮಾಡಲು ತಿಳಿದಿರಬೇಕು.
5. ಐದು ದಿನಗಳ ಅವಧಿಯಲ್ಲಿ 1200 ಮೀಟರ್ ಎತ್ತರದ ಸ್ಥಳಕ್ಕೆ ಚಾರಣ ಮಾಡಬೇಕು.
6. ಮೌಂಟನೀರಿಂಗ್ ಕ್ಲಬ್/ಇನ್‌ಸ್ಟಿಟ್ಯೂಟ್‌ನಲ್ಲಿ ಸದಸ್ಯನಾಗಿ ಸೇರಿಕೊಳ್ಳಬೇಕು ಮತ್ತು ಶಿಲಾರೋಹಣ ಕಾರ್ಯಕ್ರಮದಲ್ಲಿ ಭಾಗವಹಿಸಿ, ಸಾಕ್ಷ್ಯಾಧಾರಗಳೊಡನೆ ವರದಿ ಸಲ್ಲಿಸಬೇಕು. ಅಥವಾ

   ರಾಜ್ಯ ಸಂಸ್ಥೆಯವರು ಅಥವಾ ರಾಷ್ಟ್ರೀಯ ಸಾಹಸಿಕ ತರಬೇತಿ ಶಾಲೆ, ಪಚಮಡಿ/ ರಾಷ್ಟ್ರ ಕಾರ್ಯಾಲಯ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಇವರುಗಳು ಏರ್ಪಡಿಸುವ ಯಾವುದೇ ರಾಷ್ಟ್ರೀಯ ಸಾಹಸಿಕ ಕಾರ್ಯಕ್ರಮದಲ್ಲಿ ಭಾಗವಹಿಸಿ, ಪರೀಕ್ಷಕರಿಗೆ ವರದಿ ಸಲ್ಲಿಸಬೇಕು.

### 43. ಗ್ರಾಮೀಣ ಕಾರ್ಯಕರ್ತ (Rural Worker)



1. ಒಂದು ಗ್ರಾಮದ ವಿಸ್ತೀರ್ಣ, ಜನಸಂಖ್ಯೆ, ಕಸಬುಗಳು, ಉತ್ಪನ್ನಗಳು, ಬಾವಿಗಳು ಮತ್ತಿತರ ಜಲಮೂಲಗಳು, ಸಂಪ್ರದಾಯಗಳು, ಶಾಲಾ ವಯಸ್ಸಿನ ಮಕ್ಕಳು, ಅಕ್ಷರಸ್ಥರು ಹೀಗೆ ವಿವರವಾದ ಮಾಹಿತಿ ಹೊಂದಿರಬೇಕು.
2. ಗ್ರಾಮದ ಆರೋಗ್ಯ ರಕ್ಷಣಾ ವ್ಯವಸ್ಥೆ (ವಿಶೇಷವಾಗಿ ತಡೆಗಟ್ಟಬಹುದಾದ ರೋಗಗಳಿಗೆ ಸಂಬಂಧಿಸಿದಂತೆ) ಆಡಳಿತ ವ್ಯವಸ್ಥೆ ಮತ್ತು ಗ್ರಾಮ ಪಂಚಾಯಿತಿ ಬಗ್ಗೆ ತಿಳಿದಿರಬೇಕು.

3. ಕನಿಷ್ಠ ಆರು ತಿಂಗಳ ಕಾಲ ಗ್ರಾಮದಲ್ಲಿ ನಿರಂತರವಾಗಿ ಉಪಯೋಗಕರವಾದ ಸೇವೆ ಸಲ್ಲಿಸಿದ ಬಗ್ಗೆ ದಾಖಲೆ ನೀಡಬೇಕು. [ಸಾಕ್ಷರತೆ, ವಯಸ್ಕರ ಶಿಕ್ಷಣ, ಪಾಕೀಜು ವ್ಯವಸ್ಥೆ ಮತ್ತು ನಿರ್ಮಲೀಕರಣ; ವ್ಯವಸಾಯ; ದುಡಿಮೆಯ ಕೆಲಸ; ಮಧ್ಯಪಾನ ನಿರೋಧ; ಆಟಗಳು ಇತ್ಯಾದಿ ಗ್ರಾಮೋಪಯೋಗಿ ಕಾರ್ಯಗಳು] ಅಥವಾ

   ಒಂದು ಅಧಿಕೃತ ಗ್ರಾಮೀಣ ದುಡಿಮೆಯ ಶಿಬಿರದಲ್ಲಿ ಕನಿಷ್ಠ 15 ದಿನಗಳ ಕಾಲ ಕೆಲಸ ಮಾಡಿರಬೇಕು.

4. ಕನಿಷ್ಠ 50 ಜನರು ಕುಷ್ಠರೋಗ ತಪಾಸಣೆಯಲ್ಲಿ ಭಾಗವಹಿಸಲು ಸಹಾಯ ಮಾಡಬೇಕು.

5. ಕನಿಷ್ಠ 20 ಮಕ್ಕಳು ರೋಗ ನಿರೋಧಕ ಲಸಿಕೆ ಹಾಕಿಸಿಕೊಳ್ಳಲು ಸಹಾಯ ಮಾಡಬೇಕು.

6. "ಮೌಖಿಕ ಪುನರ್ಜಲೀಕರಣ ಚಿಕಿತ್ಸಾತಂತ್ರ" (ORT)ವನ್ನು ಕನಿಷ್ಠ 6 ತಾಯಂದಿರಿಗೆ ಬೋಧಿಸಬೇಕು.

7. ನಿಮ್ಮ ಗ್ರಾಮ / ಮೊಹಲ್ಲಾ/ ಆಸುಪಾಸಿನ ಕೊಳಚೆ ಪ್ರದೇಶದಲ್ಲಿ ಕಣ್ಣು ರಕ್ಷಣೆ/ ದಂತರಕ್ಷಣೆ, ಪ್ರಚಾರ ಕಾರ್ಯವನ್ನು ಏರ್ಪಡಿಸಬೇಕು ಅಥವಾ ಏರ್ಪಡಿಸಲು ಸಹಾಯ ಮಾಡಬೇಕು.

8. ನೆರೆಹೊರೆಯ ಪುರುಷರಿಗೆ ಆಮಶಂಕೆ ಮತ್ತು ಅತಿಸಾರ ಅಥವಾ ಹೇನು ನಿವಾರಣೆ ಬಗ್ಗೆ ಬೋಧಿಸಬೇಕು.

## 44. ಪಾಕೀಜು ಪ್ರವರ್ತಕ (Sanitation Promoter)



ನಿರ್ದಿಷ್ಟ ಸ್ಥಳದಲ್ಲಿ ಸಮೀಕ್ಷೆ ನಡೆಸಿ, ಈ ಕೆಳಗಿನ ರೀತಿಗಳಲ್ಲಿ ಜನರಿಗೆ ಸಹಾಯ ಮಾಡಬೇಕು.

1. ಅ) ಸ್ವಚ್ಛವಾದ ಕುಡಿಯುವ ನೀರಿನ ಬಳಕೆ

   ಆ) ನೀರನ್ನು ಸೋಸುವುದು, ಕುದಿಸುವುದು ಮತ್ತು ಸಂಗ್ರಹಿಸುವುದನ್ನು ಪ್ರದರ್ಶಿಸಬೇಕು

ಇ. ಇದ್ದಿಲಿನ ನೀರುಶೋಧಕ ಬಳಕೆಯನ್ನು ಪ್ರದರ್ಶಿಸಬೇಕು.

2. ಇಲಿಗಳು ಮತ್ತಿತರ ದಂಶಕ ಪ್ರಾಣಿಗಳಿಂದ ಧಾನ್ಯಗಳನ್ನು ರಕ್ಷಿಸುವುದು

3. ನೊಣಗಳು, ಸೊಳ್ಳೆಗಳು ಮತ್ತು ಧೂಳಿನಿಂದ, ಬೇಯಿಸಿದ ಆಹಾರವನ್ನು ರಕ್ಷಿಸುವುದು

4. ಸರಿಯಾದ ರೀತಿಯಲ್ಲಿ ತ್ಯಾಜ್ಯ ವಸ್ತುಗಳ ವಿಲೇವಾರಿ ಮತ್ತು ಕಾಂಪೋಸ್ಟ್ ಗುಂಡಿಯ ಉಪಯೋಗವನ್ನು ಕಾಣಿಸಬೇಕು.

5. ಬಯಲಿನಲ್ಲಿ ಶೌಚಕ್ಕೆ ಹೋಗುವ (Open defection) ಕಾರಣ ಉಂಟಾಗುವ ಅಪಾಯಗಳ ಬಗ್ಗೆ ಜನರಿಗೆ ಬೋಧಿಸುವುದು.

6. ಕಡಿಮೆ ಖರ್ಚಿನ ಮತ್ತು ಪರಿಣಾಮಕಾರಿಯಾದ ಶೌಚಾಲಯವನ್ನು ನಿರ್ಮಿಸುವುದು.

7. ಹೊಗೆಯಿಲ್ಲದ ಒಲೆಗಳನ್ನು (Smokless Chulhas) ಉಪಯೋಗಿಸಲು ಹೆಂಗಸರಿಗೆ ಮನಗಾಣಿಸುವುದು.

8. ತಾನೇ ತಯಾರಿಸಿದ ಕರಪತ್ರ/ ಭಿತ್ತಿಪತ್ರಗಳ ಮೂಲಕ, ಕನಿಷ್ಠ 25 ಮನೆಗಳ ಜನರಲ್ಲಿ ಆರೋಗ್ಯ ಲವಣಗಳನ್ನು ಉಪಯೋಗಿಸುವ ಬಗ್ಗೆ ಆಸಕ್ತಿಯನ್ನುಂಟು ಮಾಡುವುದು.

**45. ಎರಡನೆಯ ತೊಡಕು (Second Knot)**

ಈ ಕೆಳಕಂಡ ಗಂಟುಗಳನ್ನು ಹಾಕಲು ಬರಬೇಕು ಮತ್ತು ಅವುಗಳ ಉಪಯೋಗ ತಿಳಿದಿರಬೇಕು.

i) ನಾಟಿಕಲ್ ಗಂಟು (Nautical Knots)
ii) ಕ್ಯಾರಿಕ್ ಗಂಟು (Carrick bend)
iii) ನಾವಿಕನ ಗಂಟು (Sailor's knot)
iv) ಕಪಿ ಮುಷ್ಟಿಗಂಟು (Monkey fist knot)
v) ಗಲ್ಲಿಗೇರಿಸುವವನ ಗಂಟು (Hangman's Knot)



**46. ಸ್ವರಕ್ಷಣೆ (Self defence)**

ಕರಾಟೆ ಅಥವಾ ಜೂಡೋ ಅಥವಾ ಕೂಂಗ್ ಫೂ ಆರಿಸಿಕೊಳ್ಳಿ

ಅ) **ಕರಾಟೆ:** ಅರ್ಹತೆ ಪಡೆದ ನಿಪುಣರ ಮಾರ್ಗದರ್ಶನದಲ್ಲಿ, ಹಿಡಿಯುವ ಧಾಳಿಗೆ ಪ್ರತಿಯಾಗಿ ಕರಾಟೆ ರೀತಿಯು ರಕ್ಷಣೆಯುವರೆಗೆ ಕ್ರಮಬದ್ಧವಾದ, ಅನುಕ್ರಮವಾದ ಕರಾಟೆ ತರಬೇತಿ ಪಡೆಯುವುದು ಅವಶ್ಯಕ.



ಈ ಕೆಳಕಂಡ ಗುಂಪುಗಳ ಪೈಕಿ ಯಾವುದಾದರೂ ಎರಡು ಗುಂಪುಗಳನ್ನು ಪರೀಕ್ಷಕರ ಎದುರಿಗೆ ಪ್ರದರ್ಶಿಸಬೇಕು.

**ಗುಂಪು ಅ:** ಪ್ರಾರಂಭಿಕ ವ್ಯಾಯಾಮಗಳು; ಕರಾಟೆ ವರಸೆಗಳು; ಮುಷ್ಠಿಯಿಂದ ಗುದ್ದುವುದು ಮತ್ತು ತದಕುವ ತಂತ್ರಗಳು; ಉಸಿರಾಟ ತಂತ್ರಗಳು; ಯಾವುದಾದರೂ 4 ಕರಾಟೆ ವಿಧಗಳು ಮತ್ತು ಹಿಡಿತ ಧಾಳಿಗೆ ಪ್ರತಿಯಾಗಿ ರಕ್ಷಣೆ.

**ಗುಂಪು ಆ:** ಪ್ರಾರಂಭಿಕ ವ್ಯಾಯಾಮಗಳು; ಕರಾಟೆ ವರಸೆಗಳು; ರಕ್ಷಣಾ ಪ್ರತಿಬಂಧಕ ತಂತ್ರಗಳು; ಉಸಿರಾಟ ತಂತ್ರಗಳು; ಯಾವುದಾದರೂ 4 ಕರಾಟೆ ವಿಧಗಳು ಮತ್ತು ಹಿಡಿತ ಧಾಳಿಗೆ ಪ್ರತಿಯಾಗಿ ರಕ್ಷಣೆ.

ಆ) **ಜೂಡೋ:** ಅರ್ಹತೆ ಪಡೆದ ಶಿಕ್ಷಕರಿಂದ ಸೂಕ್ತ ಅವಧಿಯ ತರಬೇತಿ ಪಡೆದಿರಬೇಕು.

i) ಈ ಕೆಳಗಿನವುಗಳಲ್ಲಿ ಯಾವುದಾದರೂ ಎರಡನ್ನು ವಿವರಿಸಲು ಮತ್ತು ಪ್ರದರ್ಶಿಸಲು ಬರಬೇಕು.

ಅ. ಪಕ್ಕಕ್ಕೆ ಬೀಳಿಸುವುದು ಮತ್ತು ಹಿಂದಕ್ಕೆ ಹಾಗೂ ಮುಂದಕ್ಕೆ ಉರುಳುವುದು.

ಆ. ಸಮತೋಲನ ತಪ್ಪಿಸುವುದು.

ಇ. ಮೂಲಭೂತ ನಿಲುವುಗಳು; ಸುಗಿಯಾಷಿ ಮತ್ತು ತೈಬಾಕಿ

ಈ. ಪೃಷ್ಠ ಎಸೆತ (Hipthrow)

ಉ. ಓ–ಸೋಟೋ–ಗಾರಿ

ಊ. ಕೆ ಸ ಗಾಟಾಮೆ

ii) ಪ್ರಾಥಮಿಕ ಸ್ವರಕ್ಷಣೆಯ ಬಗ್ಗೆ, ಕೆಳಗಿನ 3 ಅಂಶಗಳೂ ಒಳಗೊಂಡಂತೆ ತಿಳಿದಿರಬೇಕು.

ಅ) ದೇಹದ ಮೇಲೆ ಧಾಳಿ ಮಾಡುವ, ಕನಿಷ್ಠ 6 ರೀತಿಗಳು.

ಆ) ಮಣಿಕಟ್ಟು ಹಿಡಿತದಿಂದುಂಟಾಗುವ ಮುಂಭಾಗದ ಉರುಲುಗಳಿಂದ ಬಿಡುಗಡೆ ಹೊಂದುವುದು.

ಇ) **ಕೂಂಗ್‌ಫೂ:** ಕೂಂಗ್‌ಫೂ ವಿಧಾನ ಕಲಿತು ಬಿಳಿನಡುಪಟ್ಟಿ (White belt) ಸಂಪಾದಿಸಬೇಕು.

## 47. ಮಣ್ಣು ಸಂರಕ್ಷಣೆ (Soil Conservation)



1. ಭೂಮಿಂತು ಮೇಲ್ಭಾಗದಲ್ಲಿ ಆಗುವ ಬದಲಾವಣೆಗಳು; ಉದಾ: ಮಣ್ಣು ಸವಕಲು, ಮಣ್ಣು ಸಾಗುವಿಕೆ ಮತ್ತು ಶೇಖರಣೆ ಇವುಗಳನ್ನು ಕಾರಣಸಹಿತ ಅರ್ಥಮಾಡಿಕೊಳ್ಳಬೇಕು.

2. ಮಣ್ಣಿನ ಸವೆತದ ಸಮಸ್ಯೆಗಳ ಬಗ್ಗೆ ಸಾಮಾನ್ಯ ತಿಳುವಳಿಕೆ ಹಾಗೂ ಅದರಿಂದಾಗುವ ದುಷ್ಪರಿಣಾಮಗಳು ಮತ್ತು ಅದನ್ನು ತಡೆಗಟ್ಟುವ ವಿವಿಧ ವಿಧಾನಗಳನ್ನು ತಿಳಿದಿರಬೇಕು.

3. ಮಣ್ಣಿನ ಸವೆತದ ಸಮಸ್ಯೆಗಳ ಬಗ್ಗೆ ಅಧ್ಯಯನ ಮಾಡಿ, ದೇಶದಲ್ಲಿ ಮಣ್ಣಿನ ಸವೆತದ ಬಗ್ಗೆ ಕೈಗೊಂಡಿರುವ ವಿವಿಧ ಕಾರ್ಯಕ್ರಮಗಳು; ಭೂಸಂರಕ್ಷಣೆ, ಅರಣ್ಯ ಬೆಳೆಸುವುದು ಮತ್ತು ನೀರಿನ ಕೊರತೆ ನಿವಾರಿಸುವುದು. ಇವುಗಳನ್ನೊಳಗೊಂಡ ಮಾಹಿತಿ ವರದಿಯನ್ನು ಸಿದ್ಧಪಡಿಸಬೇಕು. ಭೂಸಂರಕ್ಷಣೆಗೆ ಸಂಬಂಧಿಸಿರುವ ಸ್ಥಳೀಯ ಸಮಸ್ಯೆಗಳನ್ನು ಅವಲೋಕನೆ ಮತ್ತು ಅನುಭವದ ಆಧಾರದ ಮೇಲೆ ವರದಿಯನ್ನು ಸಿದ್ದಪಡಿಸಬೇಕು. ಮೂರು ತಿಂಗಳ ಅವಧಿಯ ಖಡ್ಡಾಯ ಅಧ್ಯಯನ ನಡೆಸಿರಬೇಕು.

4. ಭೂ ಸಂರಕ್ಷಣೆಗಾಗಿ ಅಳವಡಿಸಿಕೊಂಡಿರುವ ಮುಖ್ಯ ವಿಧಾನಗಳ ಬಗ್ಗೆ ತಿಳಿದಿರಬೇಕು. ಉದಾ: ಮೇರ್ ಬಂದಿ (ಮರ ನೆಡುವುದು) ಅಥವಾ ಅರಣ್ಯ ಬೆಳೆಸುವುದು, ಕೊರಕಲು ಮುಚ್ಚುವುದು (ಖಾಯ್ ಪಟನ್) ಇತ್ಯಾದಿ. ಇವುಗಳಲ್ಲಿ ಯಾವುದಾದರೂ ಒಂದು ಕಾರ್ಯಕ್ರಮದಲ್ಲಿ ಕನಿಷ್ಠ 24

ಗಂಟೆಗಳ ಸೇವೆಯನ್ನು ಸಲ್ಲಿಸಿರಬೇಕು ಹಾಗೂ ಸೇವೆ ಸಲ್ಲಿಸಿದ ಬಗ್ಗೆ ದಾಖಲೆಯನ್ನು ಪ್ರಸ್ತುತಪಡಿಸಬೇಕು.

5. ತನ್ನ ಪಟಾಲಂನವರ ಸಹಾಯದೊಂದಿಗೆ ಫಲಬಿಡುವ 10 ಸಸಿಗಳನ್ನು ನೆಟ್ಟು, 3 ತಿಂಗಳು ಪೋಷಿಸಿರಬೇಕು.

6. ಸ್ಥಳೀಯ ಭೂಸಂರಕ್ಷಣಾ ಮಂಡಲಿಯ ರಚನೆ, ಕಾರ್ಯವಿಧಾನ ಮತ್ತು ಪ್ರಯೋಗಗಳ ಬಗ್ಗೆ ಸಾಮಾನ್ಯ ತಿಳುವಳಿಕೆ ಇರಬೇಕು.

7. 40 ಗಂಟೆಗಳ ಕಾಲ ಭೂಸಂರಕ್ಷಣೆಗಾಗಿ ಸೇವೆಯನ್ನು ಸಲ್ಲಿಸಿರಬೇಕು.

8. ಪ್ರಕೃತಿ ಸಮತೋಲನ ಸಿದ್ಧಾಂತವನ್ನು ತಿಳಿದುಕೊಂಡಿರಬೇಕು ಮತ್ತು ಎರಡು ಪ್ರಾಣಿಗಳ ಅಥವಾ ಸಸ್ಯಗಳ ಜೀವನಕ್ಕೆ ಸಂಬಂಧಪಟ್ಟಂತೆ ಉದಾಹರಣೆ ಸಹಿತ ವಿವರಿಸಲು ತಿಳಿದಿರಬೇಕು. ಪ್ರಾಣಿ ಮತ್ತು ಸಸ್ಯ ವರ್ಗದ ಸಂರಕ್ಷಣೆಯ ಅವಶ್ಯಕತೆ– ಕಾರಣ ಪರಿಹಾರಗಳನ್ನು ತಿಳಿದು ಅದಕ್ಕೆ ಸಂಬಂಧಪಟ್ಟ ಕಾರ್ಯಕ್ರಮದಲ್ಲಿ ಭಾಗವಹಿಸಿರಬೇಕು.

### 48. ಕ್ರೀಡಾಪಟು (Sportsman)



1. ಹೆಸರಾಂತ ಕ್ರೀಡಾಪಟುಗಳ ಜೀವನ ಚರಿತ್ರೆ ಓದಿರಬೇಕು.

2. ಕನಿಷ್ಠ 4 ರಾಷ್ಟ್ರೀಯ/ ಅಂತರಾಷ್ಟ್ರೀಯ ಕ್ರೀಡೆಗಳ ನಿಯಮಗಳು ತಿಳಿದಿರಬೇಕು.

3. ಕೆಳ ಕಾಣಿಸಿರುವ ಗುಂಪುಗಳಲ್ಲಿ, ಗುಂಪಿಗೊಂದರಂತೆ ಎರಡು ಕ್ರೀಡೆಗಳಲ್ಲಿ ಪರಿಣತಿ ಕಾಣಿಸಬೇಕು.

   ಅ) ಹಾಕಿ, ಫುಟ್‌ಬಾಲ್, ಟೆನ್ನಿಸ್, ಕ್ರಿಕೆಟ್, ಬ್ಯಾಡ್‌ಮಿಂಟನ್

   ಆ) ನೆಟ್‌ಬಾಲ್, ಬ್ಯಾಸ್ಕೆಟ್‌ಬಾಲ್, ಥ್ರೋ ಬಾಲ್, ಲಾಂಗ್‌ಜಂಪ್, ಹೈಜಂಪ್

4. ಒಂದು ಗಂಟೆಯಲ್ಲಿ 7 ಕಿ.ಮೀ. ಕಾಲು ನಡಿಗೆಯಲ್ಲಿ ಕ್ರಮಿಸಬೇಕು ಮತ್ತು ಬ್ಲಾಕ್/ ಜಿಲ್ಲಾ/ ರಾಜ್ಯಮಟ್ಟದ ಕ್ರೀಡೆಯಲ್ಲಿ ಭಾಗವಹಿಸಬೇಕು.
   **ಅಥವಾ**

ಅರ್ಹತೆ ಪಡೆದ ಶಿಕ್ಷಕರಿಂದ 3 ತಿಂಗಳು ಅವಧಿಯ ತರಬೇತಿ ಶಿಬಿರದಲ್ಲಿ ಭಾಗವಹಿಸಿ ಶಿಕ್ಷಣ ಪಡೆದಿರಬೇಕು.

**49. ದರ್ಜಿ (Tailor)**



1. ಪರೀಕ್ಷೆಯ ಸಮಯದಲ್ಲಿ ನೀಡಲಾದ ನಮೂನೆಗೆ ತಕ್ಕಂತೆ ಹತ್ತಿ ಮತ್ತು ಉಣ್ಣೆ ಬಟ್ಟೆಗಳಲ್ಲಿ ಸರಳವಾದ ತೊಡಿಗೆಗಳನ್ನು ಕತ್ತರಿಸಲು ತಿಳಿದಿರಬೇಕು ಮತ್ತು ಕಾಣಿಸಬೇಕು.
2. ಕೆಳಗಿನ ತೊಡಿಗೆಗಳನ್ನು ಹೊಲಿದು, ಪರೀಕ್ಷಕರ ಬಳಿ ತರಬೇಕು.

   ಅ) ಬ್ಲೌಸ್/ಬೇಬಿ ಫ್ರಾಕ್ ಅಥವಾ ಷರ್ಟ್

   ಆ) ನಿಕ್ಕರ್ ಅಥವಾ ಪೆಟ್ಟಿಕೋಟ್
3. ಕಾಜಾ (Button Hole) ಮಾಡುವುದು; ನೆರಿಗೆ ಹಿಡಿದು ಹೊಲೆಯುವುದು; ಕೊನೆಯಲ್ಲಿ ಮಡಚಿ ಹೊಲಿಗೆ; ಹತ್ತಿಬಟ್ಟೆಯ ಮೇಲೆ ಹೊಲೆಯುವುದು, ನಮೂನೆ ಪ್ರಿಂಟ್ ಫ್ಲಾನಲ್/ ನೆಯ್ದ ವಸ್ತ್ರ ಮತ್ತು ಹತ್ತಿಬಟ್ಟೆಯ ಮೇಲೆ (ಅಪ್ಲೀಕ್ ತರಹ) ಪ್ಯಾಚ್ ಹಾಕುವುದು ತಿಳಿದಿರಬೇಕು.
4. ನಿಮ್ಮ ಸಮವಸ್ತ್ರವನ್ನು ಹೊಲಿದುಕೊಳ್ಳಲು ಬರಬೇಕು.

**50. ವೆಬ್ ಸುರಕ್ಷತೆ (Web Safety)**



1. ಸಾಫ್ಟ್‌ವೇರ್ ಸ್ಥಾಪಿಸುವುದಕ್ಕೆ ಮುಂಚೆ, ಪರವಾನಗಿ ಸಮ್ಮತಿ ಪತ್ರ (ಲೈಸನ್ಸಿಂಗ್ ಅಗ್ರಿಮೆಂಟ್)ವನ್ನು ಓದಿರಬೇಕು.
2. ನಿಮ್ಮ ಕಂಪ್ಯೂಟರ್/ಲ್ಯಾಪ್‌ಟಾಪ್‌ಗಳಲ್ಲಿ ಆ್ಯಂಟಿ ವೈರಸ್ ಸ್ಥಾಪಿಸುವ ಬಗ್ಗೆ ಸಾಕಷ್ಟು ತಿಳಿದಿರಬೇಕು ಮತ್ತು ಅದನ್ನು ತೆಗೆದುಹಾಕುವ ವಿಧಾನ ತಿಳಿದಿರಬೇಕು.
3. ಅಂತರ್ಜಾಲದ ಅನುಕೂಲ, ಅನಾನುಕೂಲಗಳನ್ನು ತಿಳಿದಿರಬೇಕು.
4. ನಮ್ಮ ಕಂಪ್ಯೂಟರ್ ಅನ್ನು ದುರ್ಬಳಕೆ (ಹ್ಯಾಕಿಂಗ್) ಮಾಡುವುದರಿಂದ ರಕ್ಷಣೆ ಮಾಡುವುದು ತಿಳಿದಿರಬೇಕು.

5. ಕನಿಷ್ಠ ಎರಡು ಸಾಮಾಜಿಕ ಮಾಧ್ಯಮಗಳ ಮೂಲಕ ಸುರಕ್ಷತೆ ಮತ್ತು ಸಂರಕ್ಷಣೆ ಮಾಡಬೇಕು. ಇದರಿಂದ ಅಂತರ್ಜಾಲ ಉಪಯೋಗಿಸುವ ಕನಿಷ್ಠ 10 ಗೆಳೆಯರಿಗೆ ರಕ್ಷಣೆ ದೊರಕಬೇಕು.

6. ಸ್ಥಾನಿಕವಾಗಿ 3 ತಿಂಗಳ ಕಾಲ ವೆಬ್ ಸುರಕ್ಷತಾ ಪ್ರಚಾರ ಕಾರ್ಯವನ್ನು ಕೈಗೊಂಡು ಪರೀಕ್ಷಕರಿಗೆ ವರದಿ ಒಪ್ಪಿಸಬೇಕು.

**51. ವಿಶ್ವ ಸಂರಕ್ಷಣೆ (World Conservation)**



1. ಕೆಳಗಿನ ಪದಗಳ ಅರ್ಥವನ್ನು ವಿವರಿಸಬೇಕು.

   i) ಪರಿಸರ ಅಧ್ಯಯನ (Ecology)

   ii) ಸಂರಕ್ಷಣೆ (Conservation)

   iii) ಪ್ರಕೃತಿ ಸಮತೋಲನ (Balance of Nature)

   iv) ಜೀವನ ಸರಪಳಿ (Life Chain)

   v) ಜೀವನ ಚಕ್ರ (Life Cycle)

   vi) ಜೀವ ಮಾರಕಗಳು (Biosides)

   vii) ಪುನರ್ನವೀಕರಣ (Recyeling)

   viii) ಸಂಶ್ಲೇಷಣ ಕ್ರಿಯೆ (Photosynthesis)

   ix) ಸಾವಯವ ಮತ್ತು ನಿರವಯವ ವಸ್ತುಗಳು (Organic & inorganic material)

   x) ಸೇಂದ್ರಿಯ ವಸ್ತು (Humus)

2. ಆಮ್ಲಜನಕದ ಚಕ್ರಗತಿಯ ಚಿತ್ರವನ್ನು ಬರೆದು ತೋರಿಸಿ.

3. ಪರಿಸರದಲ್ಲಿ ಮಾನವ, ಪ್ರಾಣಿ, ಸಸ್ಯ ಸಂಕುಲ ಮತ್ತು ಇತರ ಮೂಲಗಳು ಒಂದಕ್ಕೊಂದು ಹೇಗೆ ಅವಲಂಬಿಸಿವೆ ಎಂಬುದನ್ನು ಉದಾಹರಣೆಸಹಿತ ವಿವರಿಸಬೇಕು.

4. ಕಾಡ್ಗಿಚ್ಚು, ಜಲಮಾಲಿನ್ಯ, ಮಾನವನ ಚರ್ಯೆಗಳಿಂದ ಕಾಡುಪ್ರಾಣಿಗಳ ಮೇಲೆ ಆಗಬಹುದಾದ ಪರಿಣಾಮಗಳ ಬಗ್ಗೆ ನಿಮ್ಮ ತಿಳುವಳಿಕೆಯನ್ನು ಸಾದರಪಡಿಸಬೇಕು.

5. ಪ್ರವಾಹ ಉಂಟಾಗಲು ಇರುವ ಕೆಲವು ಕಾರಣಗಳನ್ನು ತಿಳಿಸಿ, ಪ್ರವಾಹವನ್ನು ತಡೆಗಟ್ಟುವ ಕೆಲವು ವಿಧಾನಗಳನ್ನು ತಿಳಿಸಬೇಕು.

6. ರಾಷ್ಟ್ರದಲ್ಲಿರುವ ಸಂರಕ್ಷಣೆಗೆ ಸಂಬಂಧಪಟ್ಟ ಪ್ರಮುಖ ಸಂಸ್ಥೆಗಳು ಮತ್ತು ಸಂಸ್ಥೆಗಳ ಬಗ್ಗೆ ತಿಳಿದಿರುವುದಾಗಿ ಸಾದರಪಡಿಸಬೇಕು.

7. ರಾಷ್ಟ್ರದಲ್ಲಿನ ಪ್ರಮುಖ ಸಂರಕ್ಷಿತ ಪ್ರಾಕೃತಿಕ ಪ್ರದೇಶಗಳನ್ನು ತಿಳಿದಿರಬೇಕು ಮತ್ತು ಅವುಗಳನ್ನು ಏತಕ್ಕಾಗಿ ಸುರಕ್ಷಿತ ಪ್ರದೇಶವೆಂಬುದಾಗಿ ಸಾರಲಾಗಿದೆ ತಿಳಿದಿರಬೇಕು.

8. ರಾಷ್ಟ್ರದ ಪ್ರಮುಖ ಸಂರಕ್ಷಣೆಯ ನಿಯಮಗಳನ್ನು ಸ್ಪಷ್ಟವಾಗಿ ತಿಳಿದಿರುವ ಬಗ್ಗೆ ಸಾದರಪಡಿಸಬೇಕು.

9. ಕೆಳಗಿನವುಗಳಲ್ಲಿ ಎರಡನ್ನು ಮಾಡಬೇಕು.

   i) ವಿಶ್ವ ಅರಣ್ಯಜೀವಿ ನಿಧಿಯವರು (WWF) ಏರ್ಪಡಿಸಿದ ಯೋಜನೆಯಲ್ಲಿ ಅಥವಾ ಅಂತರಾಷ್ಟ್ರೀಯ ಪ್ರಕೃತಿ ಸಂರಕ್ಷಣಾ ಒಕ್ಕೂಟ ಸಂಸ್ಥೆ (IUCN) ಯವರು ಸಂಘಟಿಸಿದ ಪರಿಸರ ಸಂರಕ್ಷಣೆಗೆ ಸಂಬಂಧಿಸಿದ ಯೋಜನೆಯಲ್ಲಿ ಸಕ್ರಿಯವಾಗಿ ಭಾಗವಹಿಸಬೇಕು. ಕನಿಷ್ಠ 24 ಗಂಟೆಗಳ ಕಾಲ ಒಮ್ಮೆಗೆ 8 ಗಂಟೆಗಳಿಗೆ ಮೀರದಂತೆ ಸೇವೆ ಸಲ್ಲಿಸಿರಬೇಕು.

   ii) ಕನಿಷ್ಠ 40 ಗಂಟೆಗಳ ಅವಧಿಯ ಪ್ರಮುಖ ಸಂರಕ್ಷಣಾ ಯೋಜನೆಯಲ್ಲಿ ಸಕ್ರಿಯವಾಗಿ ಭಾಗವಹಿಸಿರಬೇಕು.

   iii) ಕೆಳಗಿನ ಸಂರಕ್ಷಣಾ ಯೋಜನೆಯಲ್ಲಿ ಒಂದನ್ನು ಆಯ್ದುಕೊಂಡು ಸ್ವತಃ ಮುತುವರ್ಜಿ ವಹಿಸಿ ಪಾಲ್ಗೊಳ್ಳಬೇಕು.

   ಅ) ಸ್ವಚ್ಛತಾ ಕಾರ್ಯಕ್ರಮ

   ಆ) ಭೂಭಾಗವನ್ನು ಸುಂದರಗೊಳಿಸುವುದು ಅಥವಾ ಪುನರುಜ್ಜೀವನಗೊಳಿಸುವುದು.

   ಇ) ಮಾಹಿತಿ ಪ್ರಸಾರದ ಮೂಲಕ ಸಾರ್ವಜನಿಕ ಅಭಿಪ್ರಾಯವನ್ನು ಸಂಗ್ರಹಿಸುವುದು.

   ಈ) ಭಿತ್ತಿಪತ್ರಗಳ ತಯಾರಿ.

ಉ) ಪ್ರದರ್ಶನಗಳನ್ನು ಏರ್ಪಡಿಸುವುದು.

ಊ)ವಸ್ತುಪ್ರದರ್ಶನವನ್ನು ಸಂಘಟಿಸುವುದು.

ಋ) ಕರಪತ್ರಗಳನ್ನು ಸಿದ್ಧಪಡಿಸುವುದು.

10. ಕೆಳಗಿನವುಗಳಲ್ಲಿ ಒಂದನ್ನು ಮಾಡಬೇಕು.

i) ಅರಣ್ಯ ಅಧಿಕಾರಿ ಅಥವಾ ಸಂರಕ್ಷಣಾ ಅಧಿಕಾರಿಯೊಂದಿಗೆ ಒಮ್ಮೆಗೆ 4 ಗಂಟೆಗಳ ಕಾಲಾವಧಿಯಂತೆ ಕನಿಷ್ಠ ಎರಡು ಬಾರಿ ಕಳೆಯಬೇಕು. ಆ ಕಾಲಾವಧಿಯಲ್ಲಿ ತನ್ನ ಗಮನಿಕೆಗಳ ಬಗ್ಗೆ ವರದಿಯನ್ನು ಸಿದ್ಧಪಡಿಸಬೇಕು.

ii) ಸಂರಕ್ಷಣೆ ಮತ್ತು ಪ್ರಕೃತಿ ಅಧ್ಯಯನವೇ ಮುಖ್ಯ ಗುರಿಯಾಗುಳ್ಳ ಮೂರು ದಿನಗಳಿಗೆ ಕಡಿಮೆ ಇಲ್ಲದ ಶಿಬಿರದಲ್ಲಿ ಭಾಗವಹಿಸಿರಬೇಕು.

iii) ನೀವು ಮತ್ತು ನಿಮ್ಮ ಪರೀಕ್ಷಕರು ಕೂಡಿ ನಿರ್ಧರಿಸಿದ ವಿಶೇಷ ಸಂರಕ್ಷಣೆಯ ಯೋಜನೆಯೊಂದನ್ನು ಅಭಿವೃದ್ಧಿಪಡಿಸಿ ಸಂಪೂರ್ಣಗೊಳಿಸಬೇಕು.

ಸೂಚನೆ: ರಾಜ್ಯ ಮುಖ್ಯ ಆಯುಕ್ತರಿಂದ ಸಹಿ ಪಡೆದ ಪ್ರಮಾಣ ಪತ್ರವನ್ನು ಈ ಪದಕದ ಜೊತೆ ನೀಡಲಾಗುತ್ತದೆ.

ಈ ಪದಕವನ್ನು ಷರ್ಟಿನ ಎಡತೋಳಿನ ಮೇಲೆ ರಾಷ್ಟ್ರಪತಿ ರೋವರ್ ಪದಕದ ಕೆಳಗೆ ಧರಿಸಬೇಕು.

**52. ವಿಶ್ವಮೈತ್ರಿ (World Friendship)**



1) ತನ್ನ ದೇಶವನ್ನು ಹೊರತುಪಡಿಸಿ ಕನಿಷ್ಠ ಮೂರು ಇತರ ದೇಶಗಳ ಭೌಗೋಳಿಕ, ಚಾರಿತ್ರಿಕ ಮತ್ತು ಜನಾಂಗಗಳ ವಿಷಯವನ್ನು ತಿಳಿದಿರಬೇಕು.

2) ಒಂದು ವರ್ಷಕ್ಕೆ ಕಡಿಮೆ ಇಲ್ಲದಂತೆ ನಿರಂತರವಾಗಿ ಮತ್ತೊಂದು ದೇಶದ ರೋವರ್‌ನೊಡನೆ ಪತ್ರವ್ಯವಹಾರ ನಡೆಸಿರಬೇಕು (ಕನಿಷ್ಠ 9 ಪತ್ರಗಳು).

3) ವಿಶ್ವ ಸ್ಕೌಟ್ ಸಂಸ್ಥೆಯ ಚಟುವಟಿಕೆಗಳ ಬಗ್ಗೆ ತಿಳುವಳಿಕೆ ಪಡೆದಿರಬೇಕು. ಸ್ಕೌಟಿಂಗ್‌ನ ಅಂತರಾಷ್ಟ್ರೀಯತೆಯ ಬಗ್ಗೆ ದಾಖಲೆ ಪುಸ್ತಕವನ್ನು ಸಿದ್ಧಪಡಿಸಬೇಕು.

4. ಕೆಳಗಿನವುಗಳಲ್ಲಿ ಕನಿಷ್ಠ ಮೂರನ್ನು ಮಾಡಬೇಕು.

   i) ಮತ್ತೊಂದು ದೇಶದ ರೋವರ್ ಲೇಖನಗಳು, ಕ್ರೀಡೆ, ಸಂಸ್ಕೃತಿ, ರಾಷ್ಟ್ರೀಯ ವ್ಯವಹಾರಗಳು ಮತ್ತು ಗೃಹಜೀವನಗಳ ಬಗ್ಗೆ ಕನಿಷ್ಠ ಒಂದು ವರ್ಷ ಕಾಲಾವಧಿಯಲ್ಲಿ ಚಿತ್ರಸಹಿತ ಲೇಖನಗಳನ್ನು ಸಂಗ್ರಹಿಸಿ, ಮಾಹಿತಿ ಪುಸ್ತಕರೂಪದಲ್ಲಿ ಸಿದ್ಧಪಡಿಸಿರಬೇಕು.

   ii) ವಿಶ್ವಸಂಸ್ಥೆಯ (ಯು.ಎನ್.ಒ.) ಉದ್ದೇಶ ಮತ್ತು ರಚನೆ. ಅದರ ಶಾಖೆಗಳ ಕಾರ್ಯವಿಧಾನ, ವಿಶ್ವಸಂಸ್ಥೆಯ ಶಾಸನಾಧಿಕಾರದ ಮುಖ್ಯಾಂಶಗಳು, ಮಾನವ ಹಕ್ಕುಗಳ ಪೋಷಣೆಯ ಪ್ರಮುಖ ತತ್ತ್ವಗಳು ಇವುಗಳನ್ನು ಸರಳವಾಗಿ ವಿವರಿಸಲು ಬರಬೇಕು.

   iii) ಅಂತರಾಷ್ಟ್ರೀಯ ವಾಸ್ತವಿಕ ಚಟುವಟಿಕೆಯೊಂದರಲ್ಲಿ ಭಾಗವಹಿಸಿರಬೇಕು. ಉದಾ: ಸಂತ್ರಸ್ತ ಪರಿಹಾರ ವಸ್ತುಗಳ ಸಂಗ್ರಹಣೆ ಮತ್ತು ವಿತರಣೆ ಅಥವಾ ಪಕ್ಷಾವಲಂಬಿಯಲ್ಲದ ಸಂಸ್ಥೆಯೊಂದು, ವಿಶ್ವ ಸೋದರತೆಯನ್ನು ಸಾಧಿಸಲು ಸಂಚಾಲನೆ ಮಾಡುವ ಯೋಜನೆಯೊಂದರಲ್ಲಿ ಭಾಗವಹಿಸಿರಬೇಕು.

   iv) ವಿದೇಶದ ರೋವರ್ ಒಬ್ಬನಿಗೆ 3 ದಿನಗಳ ಕಾಲ ತನ್ನ ಮನೆಯಲ್ಲಿ ಆತಿಥ್ಯ ನೀಡಬೇಕು.

   v) ಸಮಕಾಲೀನ ವಿಶ್ವ ವ್ಯವಹಾರದ ಯಾವುದಾದರೊಂದು ವಿಷಯದ ಬಗ್ಗೆ ಸಣ್ಣ ಪ್ರಬಂಧವನ್ನು ಬರೆಯಬೇಕು.

## 53. ವಿಶ್ವ ಸ್ಕೌಟ್ ಪರಿಸರ (World Scout Environment)

ವಿಶ್ವ ಸ್ಕೌಟ್ ಪರಿಸರ ಪದಕವು, ಅಂತರಾಷ್ಟ್ರೀಯ ಪ್ರಶಸ್ತಿ ಆಗಿದೆ. ವಿಶ್ವದ ಎಲ್ಲೆಡೆ ಎಲ್ಲಾ ಸ್ಕೌಟ್‌ಗಳು ಸಮವಸ್ತ್ರದ ಮೇಲೆ ಈ ಪದಕವನ್ನು ಧರಿಸುತ್ತಾರೆ. ಪರಿಸರದ ಬಗ್ಗೆ ಸ್ಕೌಟಿಂಗ್‌ನ ಕಾಳಜಿಯನ್ನೂ, ಪರಿಸರವನ್ನು ಸಕ್ರಿಯವಾಗಿ ರಕ್ಷಿಸುವ ಜವಾಬ್ದಾರಿ ಹೊತ್ತಿರುವುದನ್ನೂ ಇದು ಸೂಚಿಸುತ್ತದೆ.



**ಪರೀಕ್ಷಾಂಶಗಳು**

1. ಜನರೂ, ಸ್ವಾಭಾವಿಕ ಜೈವಿಕ ಕ್ರಿಯೆಗಳೂ (Natural Systems) ಸ್ವಚ್ಛವಾದ ನೀರು ಮತ್ತು ಗಾಳಿಯನ್ನು ಪಡೆಯುತ್ತಾರೆ/ತ್ತವೆ.

   ಅ) ನಿಮ್ಮ ಸಮುದಾಯದ ಜಲನಿರ್ಮಲೀಕರಣ ಕೇಂದ್ರವನ್ನು ಸಂದರ್ಶಿಸಿ, ನಿಮ್ಮ ಸಮುದಾಯಕ್ಕೆ ಸ್ಥಳೀಯವಾಗಿ ಸ್ವಚ್ಛವಾದ ನೀರು ದೊರಕುವ ಮೂಲ ತಾಣವನ್ನು ನಿರ್ಧರಿಸಿ

   ಆ) ನಿಮ್ಮ ಸ್ಥಳೀಯ/ ಸಮುದಾಯದ ಗಾಳಿಯ ಗುಣಮಟ್ಟವನ್ನು ಪ್ರಯೋಗಾತ್ಮಕ ಅರಿತವರಾಗಿ

2. ಸಾಕಷ್ಟು ಸ್ವಾಭಾವಿಕ ನೆಲೆಯು ಲಭ್ಯವಿದ್ದು, ಸ್ವಾಭಾವಿಕ ಜೀವವರ್ಗಗಳಿಗೆ ಆಸರೆ ಇರುತ್ತದೆ.

   ಅ) ಸೂಕ್ತ ನಿಸರ್ಗ ಪ್ರದೇಶಕ್ಕೆ ಭೇಟಿ ನೀಡಿ. ಆ ಹೊರಾಂಗಣದಲ್ಲಿ 36 ಗಂಟೆ ಕಾಲ ಕಳೆಯಿರಿ. ಈ ಅವಧಿಯಲ್ಲಿ ಬದಲಾಗುತ್ತಾ ಹೋಗುವ ಹವೆ, ಬೆಳಕು–ಕತ್ತಲೆ, ಶಬ್ದಗಳು, ವಾಸನೆಗಳು ಪ್ರಾಣಿವರ್ಗ ಮತ್ತು ಹಕ್ಕಿಪಕ್ಷಿಗಳ ಚಲನವಲನ ಮುಂತಾದುವನ್ನು ಗಮನಿಸಿ ಪುಸ್ತಕದಲ್ಲಿ ದಾಖಲಿಸಿ.

   ಆ) ಒಂದು ಹೆಕ್ಟೇರ್ ವಿಸ್ತೀರ್ಣದ ಪ್ರಕೃತಿದತ್ತ ಪ್ರದೇಶದಲ್ಲಿ ನಡೆದಾಡಿ. ಸಸ್ಯವರ್ಗ, ಪ್ರಾಣಿವರ್ಗ ಪರಸ್ಪರ ಬಾಂಧವ್ಯವನ್ನು ಗಮನಿಸಿ, ದಾಖಲಿಸಿ.

3. ಜನರಿಗೂ, ಪರಿಸರಕ್ಕೂ, ಹಾನಿಕರ ವಸ್ತುಗಳಿಂದುಂಟಾಗುವ ಕೆಡುಕನ್ನು ಆದಷ್ಟು ಕಡಿಮೆ ಆಗುವಂತೆ ಎಚ್ಚರ ವಹಿಸುವುದು.

   ಅ) ನಿಮ್ಮ ಸಮುದಾಯದಲ್ಲಿ ಸಾಮಾನ್ಯವಾಗಿ ಉಪಯೋಗಿಸುವ ರಾಸಾಯನಿಕ ವಸ್ತುಗಳನ್ನು ಗಮನಿಸಿ, ಪಟ್ಟಿಮಾಡಿ, ದಾಖಲಿಸಿ.

   ಆ) ಸ್ಥಳೀಯ ಜನರ ಮೇಲೆ ಅಪಾಯಕಾರಿಯಾದ ವಸ್ತುಗಳಿಂದಾದ ಪರಿಣಾಮವನ್ನು ಸಂಶೋಧಿಸಿ ತಿಳಿಯಿರಿ.

   ಇ) ತುರ್ತು ಸಮಯಗಳಲ್ಲಿ ಸನ್ನದ್ಧರಾಗಿರಲು ವಿಶೇಷ ರೀತಿಯ ತರಬೇತಿ ನೀಡುವ ಸಂಸ್ಥೆಗಳನ್ನು ಪತ್ತೆಮಾಡಿ, ಪ್ರಾಥಮಿಕ ಮಟ್ಟದ ಅಂತಹ ತರಬೇತಿಯನ್ನು ಪಡೆಯಿರಿ.

* ತುರ್ತು ಸಮಯದಲ್ಲಿ ಪ್ರಥಮ ಚಿಕಿತ್ಸೆ; 72 ಗಂಟೆಗಳ ತುರ್ತು ಪೆಟ್ಟಿಗೆ (ಎಮರ್ಜೆನ್ಸಿ ಕಿಟ್) ಹುಡುಕುವುದು ಮತ್ತು ಸಂರಕ್ಷಿಸುವುದು; ಪ್ರಾದೇಶಿಕ ತುರ್ತು ಕ್ರಮಗಳು; ಅರಣ್ಯ ಪ್ರದೇಶದಲ್ಲಿ ಪ್ರಥಮ ಚಿಕಿತ್ಸೆ.

ಈ) ಸ್ಥಳೀಯವಾದ ಪರಿಸರ ಸಂಬಂಧ ವಿಷಯವನ್ನು ಆಯ್ಕೆಮಾಡಿಕೊಳ್ಳಿ. ಆ ಆಯ್ಕೆಯು ಈ ಮುಂಚಿನ ಕಲಿಕೆಗೂ, ಸ್ಥಳೀಯ ಪರಿಸರಕ್ಕೂ ಸಂಬಂಧವಿರುವಂತಹುದಾಗಲಿ.

## 54. ಯೋಗ ಬೋಧಕ (Yoga Instructor)

ಯೋಗ ಬೋಧಕನಾಗಿ ಮೂಲ ತರಬೇತಿ ಪಡೆಯಬೇಕು.



1. ಯೋಗಾಸನವು ವ್ಯಕ್ತಿಯ ಸಾಮಾನ್ಯ ಮಾನಸಿಕ ಹಾಗೂ ದೈಹಿಕ ಸ್ವಾಸ್ಥ್ಯಕ್ಕಾಗಿ ಮಾಡುವ ದೇಶೀಯ ವ್ಯಾಯಾಮ ಪದ್ಧತಿ ಎಂಬ ವಿಷಯದಲ್ಲಿ ತಿಳುವಳಿಕೆ ಇರಬೇಕು.
2. ಬೋಧಕರಾಗಿ ನಿಮ್ಮ ತಂಡ/ ತಂಡದ ಸದಸ್ಯರಾಗಿ ಸರಿಯಾದ ಸ್ಥಿತಿ ಮತ್ತು ಚಲನೆಗಳನ್ನೂ ಹಾಗೂ ಗಾಯಗೊಳ್ಳದಂತೆ ಎಚ್ಚರಿಕೆ ವಹಿಸುವುದನ್ನೂ ತಿಳಿಸಬೇಕು.
3. ಯೋಗ ತರಗತಿಯಲ್ಲಿ ಯೋಗಾಭ್ಯಾಸವನ್ನು ಕಲಿಸಬೇಕು.
4. ಕನಿಷ್ಠ 3 ತಿಂಗಳ ಕಾಲ ಸತತವಾಗಿ ಯೋಗಾಭ್ಯಾಸ ಮಾಡಿರಬೇಕು.
5. ಪರೀಕ್ಷಕರಿಗೆ ಒಪ್ಪಿಗೆ ಆಗುವ ರೀತಿಯಲ್ಲಿ ಯೋಗಾಸನವನ್ನು ಮಾಡಿ ತೋರಿಸಬೇಕು.
6. ಮೂರು ತಿಂಗಳೊಳಗೆ "ಯೋಗ"ದ ಚರಿತ್ರೆ ಮತ್ತು ಯೋಗಾಸನಗಳ ಬಗ್ಗೆ ಒಂದು ಪುಸ್ತಿಕೆಯನ್ನು ತಯಾರಿಸಬೇಕು. ಪರೀಕ್ಷಕರಿಂದ ಅನುಮೋದನೆ ಪಡೆದು ಯೋಗ ತರಗತಿಗಳಲ್ಲಿ ಅದನ್ನು ಹಂಚಬಹುದು.



## ಅಧ್ಯಾಯ–4

# ರೋವರ್‌ಗಳಿಗೆ ಪೂರಕವಾದ ಸ್ಕೌಟ್ ಪ್ರವೀಣತಾ ಪದಕಗಳು ಮತ್ತು ಅವುಗಳ ಪರೀಕ್ಷಾಂಶಗಳು

(ಈ ಸ್ಕೌಟ್ ಪ್ರಾವಿಣ್ಯತಾ ಪದಕಗಳನ್ನು ರೋವರ್‌ಗಳು ಧರಿಸುವಂತಿಲ್ಲ)

**1. ಏಡ್ಸ್ ಜಾಗೃತಿ (Aids awareness)**




1. ಹೆಚ್.ಐ.ವಿ. ಹರಡುವಿಕೆ ವಿಧಾನಗಳು ಮತ್ತು ತಡೆಗಟ್ಟುವ ವಿಧಾನಗಳನ್ನು ತಿಳಿದಿರಬೇಕು. ಹಾಗೂ ಅರ್ಥಮಾಡಿ ಕೊಂಡಿರಬೇಕು.
2. ರೋಗದ ಸ್ವಾಭಾವಿಕ ಗುಣಗಳನ್ನು ತಿಳಿದಿರಬೇಕು.
3. ಅದರ ಹರಡುವಿಕೆಯನ್ನು ತಡೆಗಟ್ಟಲು ಆರೋಗ್ಯ ಅಧಿಕಾರಿಗಳು ಕೈಗೊಂಡಿರುವ ಕ್ರಮಗಳ ಬಗ್ಗೆ ತಿಳಿದಿರಬೇಕು.
4. ಈ ಕೆಳಕಂಡ ಅಂಶಗಳ ಬಗ್ಗೆ ಜನರಲ್ಲಿ ಜಾಗೃತಿ ಮೂಡಿಸಲು ಒಂದು ಕಾರ್ಯಕ್ರಮವನ್ನು ಯೋಜಿಸಬೇಕು.
   - ಅ. ರೋಗವು ಅಂಟಿದರೆ ಉಂಟಾಗುವ ಅಪಾಯಗಳು.
   - ಆ. ಹರಡುವಿಕೆಯ ವಿಧಾನಗಳು.
   - ಇ. ಹೆಚ್.ಐ.ವಿ. ಸೋಂಕು ಮತ್ತು ಏಡ್ಸ್ ಬಗೆಗಿನ ಮಿಥ್ಯ ಹಾಗೂ ತಪ್ಪು ಮಾಹಿತಿಗಳನ್ನು ನಿವಾರಿಸುವುದು.
   - ಈ. ಒಬ್ಬ ವ್ಯಕ್ತಿಯಲ್ಲಿ ಮತ್ತು ಸಮುದಾಯದಲ್ಲಿ ಇದನ್ನು ತಡೆಗಟ್ಟುವುದರ ವಿಧಾನಗಳು.

**2. ಚರ ಚಿಕಿತ್ಸಕ (Ambulanceman)**



ಪದಕವನ್ನು ಎರಡೂ ತೋಳುಗಳ ಹೊಲಿಗೆಯ ಕೆಳಗೆ ಧರಿಸಬೇಕು (ಬಿಳಿಯ ಹಿನ್ನೆಲೆಯ ಮೇಲೆ ಕೆಂಪು ಬಣ್ಣದ ಶಿಲುಬೆ ಹಸಿರು ಉಂಗುರದಿಂದ ಸುತ್ತುವರಿದಿರುತ್ತದೆ).

1. ಪ್ರಥಮ ಸೋಪಾನ, ದ್ವಿತೀಯ ಸೋಪಾನ, ತೃತೀಯ ಸೋಪಾನಗಳ ಪ್ರಥಮ ಚಿಕಿತ್ಸಾ ಪರೀಕ್ಷಾಂಶಗಳ ಪ್ರಶ್ನೆಗಳಿಗೆ ಉತ್ತರಿಸಲು ತಿಳಿದಿರಬೇಕು.

2. ಸಣ್ಣ ಮತ್ತು ದೊಡ್ಡ ರಕ್ತಸ್ರಾವವನ್ನು ನಿಲ್ಲಿಸಲು ಕೈಗೊಳ್ಳುವ ಕ್ರಮವನ್ನು ತಿಳಿದಿರಬೇಕು.

3. ಮುರಿದ ಕಾಲು ಮೂಳೆ, ಕೈ ಮೂಳೆಯನ್ನು ಪತ್ತೆ ಹಚ್ಚುವುದು ಮತ್ತು ಕಟ್ಟುವುದು.

4. **ಹೆವ್‌ಲಿಚ್** ವಿಧಾನದಿಂದ ಉಸಿರುಕಟ್ಟುವುದನ್ನು ನಿಲ್ಲಿಸುವ ಬಗೆ ತಿಳಿದಿರಬೇಕು.

5. ಬಾಯಿಂದ ಬಾಯಿಗೆ ಕೃತಕ ಉಸಿರಾಟವನ್ನು (ಎ.ಎಂ.ಆರ್) ನೀಡುವ ಬಗ್ಗೆ ತಿಳಿದಿರಬೇಕು.

6. ರೋಗಿಗಳನ್ನು ಸಾಗಿಸಲು ಸುಧಾರಿತ ಡೋಲಿಯನ್ನು ತಯಾರಿಸುವುದನ್ನು ಹಾಗೂ ಸುರುಳಿ ಬ್ಯಾಂಡೇಜ್ ಸುತ್ತುವ ಬಗ್ಗೆ ತಿಳಿದಿರಬೇಕು.

7. ಮೌಖಿಕ. ಲಿಖಿತ ಅಥವಾ ದೂರವಾಣಿಯ ಮೂಲಕ ತಪ್ಪಿಲ್ಲದಂತೆ ಸುದ್ಧಿಯನ್ನು ತಲುಪಿಸುವುದನ್ನು ಮಾಡಿ ತೊರಿಸಲು ತಿಳಿದಿರಬೇಕು.

8. ಒಬ್ಬನೇ ಪ್ರಥಮ ಚಿಕಿತ್ಸಕನಿರುವಾಗ ರೋಗಿಯನ್ನು ಸಾಗಿಸುವ 2 ವಿಧಾನಗಳನ್ನು ತೋರಿಸಬೇಕು. ಮತ್ತು ಇಬ್ಬರು ಪ್ರಥಮ ಚಿಕಿತ್ಸಕರು ಇರುವಾಗ ಮತ್ತೆರಡು ವಿಧಾನಗಳನ್ನು ರೋಗಿಯನ್ನು ಸಾಗಿಸುವ ಬಗೆಯನ್ನು ತೋರಿಸಬೇಕು.

### 3. ಕ್ರೀಡಾಪಟು (Athlete)

1. ಪಂದ್ಯಕ್ಕೆ ಮುನ್ನ ಕುಳಿತುಕೊಳ್ಳುವ, ನಿಲ್ಲುವ, ನಡೆಯುವ, ಓಡುವ ರೀತಿಗಳನ್ನು ಮತ್ತು ಪಂದ್ಯವನ್ನು ಪ್ರಾರಂಭಿಸುವ ವಿಧಾನಗಳನ್ನು ಪ್ರದರ್ಶಿಸಬೇಕು.

2. ಸರಿಯಾದ ತರಬೇತಿ ಪಡೆದಿರುವ ಬಗ್ಗೆ ಮತ್ತು ಸಕ್ರಮವಾದ ಹೊರಾಂಗಣ ವ್ಯಾಯಾಮ ಮಾಡುತ್ತಿರುವುದರ ಬಗ್ಗೆ ಪುರಾವೆ ನೀಡಬೇಕು.



12 ರಿಂದ 14 ವರ್ಷಗಳು ವಯಸ್ಸಿಗನುಗುಣವಾಗಿ

3. ಈ ಕೆಳಗಿನವುಗಳಲ್ಲಿ ಯಾವುದಾದರೂ 4ರಲ್ಲಿ ಅಂಕಗಳನ್ನು ಗಳಿಸಬೇಕು.

12 ವರ್ಷ 26 ಅಂಕಗಳು

13 ವರ್ಷ 30 ಅಂಕಗಳು

14 ವರ್ಷ 36 ಅಂಕಗಳು

ಸ್ಟಾಂಡರ್ಡ್ 6 ಅಂಕಗಳು; 1ಕ್ಲಾಸ್ 8 ಅಂಕಗಳು; ವಿಶೇಷ 10 ಅಂಕಿಗಳು

| ಸ್ಪರ್ಧೆ | ನಿರ್ದಿಷ್ಟಮಾನ 6 ಅಂಕಗಳು | ಪ್ರಥಮ ಶ್ರೇಣಿ 8 ಅಂಕಗಳು | ವಿಶೇಷ 10 ಅಂಕಗಳು |
|---|---|---|---|
| 1. 100 ಮೀ. ಓಟ | 16. ಸೆ. | 15.ಸೆ. | 14.ಸೆ. |
| 2. 800 ಮೀ. ಓಟ | 2 ನಿ. 46 ಸೆ. | 2 ನಿ. 43 ಸೆ. | 2 ನಿ. 40 ಸೆ. |
| 3. ಓಟದಲ್ಲಿ ಎತ್ತರ ಜಿಗಿತ | 1.06 ಮೀ. | 1.13 ಮೀ. | 1.2 ಮೀ. |
| 4. ಓಟದಲ್ಲಿ ಉದ್ದ ಜಿಗಿತ | 3.8 ಮೀ. | 4.1 ಮೀ. | 4.4 ಮೀ. |
| 5. ಕ್ರಿಕೇಟ್ ಬಾಲ್ ಎಸೆತ | 36.5 ಮೀ. | 41 ಮೀ. | 46 ಮೀ |
| ಅಥವಾ | | | |
| ಗುಂಡು ಎಸೆತ (8.11 ಪೌಂ.) | 6.1 ಮೀ. | 7.62 ಮೀ. | 8. 53 ಮೀ. |

15 ರಿಂದ 17 ವರ್ಷಗಳು

ವಯಸ್ಸಿಗನುಗುಣವಾಗಿ ಈ ಕೆಳಗಿನವುಗಳಲ್ಲಿ ಯಾವುದಾದರೂ 5ರಲ್ಲಿ ಅಂಕ ಗಳಿಸಬೇಕು

15 ವರ್ಷ 40 ಅಂಕಗಳು

16 ವರ್ಷ 45 ಅಂಕಗಳು

17 ವರ್ಷ 50 ಅಂಕಗಳು

ಸ್ಟಾಂಡರ್ಡ್ 8 ಅಂಕಗಳು; 1 ಕ್ಲಾಸ್ 10 ಅಂಕಗಳು; ವಿಶೇಷ 12 ಅಂಕಗಳು

| ಸ್ಪರ್ಧೆ | ನಿರ್ದಿಷ್ಟಮಾನ 8 ಅಂಕಗಳು | ಪ್ರಥಮ ಶ್ರೇಣಿ 10 ಅಂಕಗಳು | ವಿಶೇಷ 12 ಅಂಕಗಳು |
|---|---|---|---|
| 1. 100 ಮೀ. ಓಟ | 15. ಸೆ. | 14.ಸೆ. | 13.ಸೆ. |
| 2. 800 ಮೀ. ಓಟ | 3 ನಿ. 20 ಸೆ. | 3 ನಿ. 10 ಸೆ. | 2 ನಿ. 40 ಸೆ. |
| 3. ಓಟದಲ್ಲಿ ಎತ್ತರ ಜಿಗಿತ | 104.14 ಸೆ.ಮೀ. | 121.92 ಸೆ.ಮೀ. | 137.16 ಸೆ.ಮೀ. |
| 4. ಓಟದಲ್ಲಿ ಉದ್ದ ಜಿಗಿತ | 3.66 ಮೀ. | 3.96 ಮೀ. | 4.47 ಮೀ. |
| 5. ಗುಂಡು ಎಸೆತ (13 ಪೌಂ.) | 6.1 ಮೀ. | 7.62 ಮೀ. | 8. 53 ಮೀ. |
| ಅಥವಾ ಕ್ರಿಕೇಟ್ ಬಾಲ್ ಎಸೆತ | 38.1 ಮೀ. | 47.72 ಮೀ. | 50.96 ಮೀ |
| 6. ದಂಡ ಹೊಡೆಯುವುದು | 86 ಸೆ.ಗಳಲ್ಲಿ 15 | 1 ನಿ. 10 ಸೆ. ಗಳಲ್ಲಿ 30 | 2 ನಿ.ಗಳಲ್ಲಿ 50 |
| ಬೈಠಕ್ (Squatthrust) | – | – | 30 ಸೆ.ಗಳ ಕಾಲ |

4. **ಅಂಬಿಗ (Boatman)**



1. 'ದೋಣಿ ನಡೆಸುವವ' (Oarsman) ಪದಕ ಪಡೆದಿರಬೇಕು.
2. ದೋಣಿಯನ್ನು ನಡೆಸಬೇಕು. ಹಾಯಿ ಪಟದ ಹಗ್ಗ ಕಟ್ಟಬೇಕು, ಹಾಯಿ ಪಟ ಸರಿಪಡಿಸಬೇಕು, ಹಾಯಿ ಪಟ ಏರಿಸಬೇಕು ಮತ್ತು ಕಡಿಮೆ ಮಾಡಬೇಕು.
3. ಹಾಯಿ ಪಟವನ್ನು ಮಡಚಿ ಬಿಗಿಯಾಗಿ ಕಟ್ಟಲು ಅಣಿಗೊಳಿಸಬೇಕು.
4. ಹಡಗಿನ ಸಜಾವಣೆ (rig) ಅಥವ ಬಾಹ್ಯ ಆಕೃತಿಯ ಆಧಾರದ ಮೇಲೆ ಇಂದಿನ ಹಾಯಿ ದೋಣಿ ಮತ್ತು ಹಡಗುಗಳ ಸಾಮಾನ್ಯ ವಿಧಗಳನ್ನು ಗುರುತಿಸಬೇಕು.
5. ಸಮುದ್ರ ಲಂಗರಿನ ತಯಾರಿ, ಉಪಯೋಗಗಳನ್ನು ತಿಳಿದಿರಬೇಕು.
6. ಸಮುದ್ರ ಪಥ ತಿಳಿದಿರಬೇಕು.

5. **ಪುಸ್ತಕ ರಟ್ಟು ಕಟ್ಟುವವ**

ಪುಸ್ತಕಕ್ಕೆ ರಟ್ಟು ಕಟ್ಟುವ ಕಾರ್ಯದಲ್ಲಿ ಈ ಕೆಳಗಿನ ಕೆಲಸಗಳನ್ನು ಮಾಡಬೇಕು.



1. ವಿವಿಧ ಭಾಗಗಳನ್ನು ಹೊಲಿಯಲು ಸಿದ್ಧಗೊಳಿಸು ವುದು ಹಾಗೂ ಆ ಭಾಗಗಳನ್ನು ಟೇಪ್ ಮೇಲೆ ಹೊಲಿಯುವುದು.
2. ಕೊನೆಯ ಕಾಗದದ ತುದಿಗಳನ್ನು ಮಡಚಿ ಅಂಟಿಸುವುದು. ತೆಳುವಾದ ಬಟ್ಟೆಯ ಲೈನಿಂಗ್ ಹಾಕುವುದು ಮತ್ತು ಎರಡನೆಯ ಲೈನಿಂಗ್ ಹಾಕುವುದು.
3. ದಪ್ಪ ರಟ್ಟನ್ನು ಕತ್ತರಿಸಿ, ಬಟ್ಟೆ ಅಥವಾ ಪೇಪರ್‌ನಿಂದ ಮುಚ್ಚಿ ಪುಸ್ತಕವನ್ನು ಪೆಟ್ಟಿಗೆಯಲ್ಲಿಡುವುದು.
4. ಶಾಲೆಯ ಗ್ರಂಥಾಲಯದ, ಅಥವಾ ನಿಮ್ಮ ಗುಂಪಿನ ಒಬ್ಬ ಬಡ ವಿದ್ಯಾರ್ಥಿ / ಅಂಗವಿಕಲ ಬಾಲಕನ, ಎರಡು ಪಠ್ಯ ಪುಸ್ತಕಗಳಿಗೆ ರಟ್ಟು ಕಟ್ಟಬೇಕು.
5. ಮತ್ತೊಬ್ಬ ಸ್ಕೌಟ್‌ಗೆ ಅಥವಾ ಸ್ನೇಹಿತನಿಗೆ ರಟ್ಟುಕಟ್ಟುವ ಕಲೆಯನ್ನು ಕಲಿಸುವುದು.

6. **ಒಂಟೆ ಸವಾರ (ಕ್ಯಾಮಲ್ ಮನ್)**

1. ಮರಳುಗಾಡು ಪ್ರದೇಶದಲ್ಲಿ ಸಾಮಾನ್ಯವಾಗಿ ಉಪಯೋಗಿಸುವ ಸಾಗಾಣಿಕೆಯ ಕ್ರಮವನ್ನು ತಿಳಿದಿರಬೇಕು.

2. 'ಮರಳು ಗಾಡಿನ ಜಹಜು' ಎಂದು ಕರೆಯುವ 'ಒಂಟೆ ಬಗ್ಗೆ ತಿಳಿವಳಿಕೆ ಇರಬೇಕು. ಅವುಗಳ ವೈವಿಧ್ಯತೆ ಮತ್ತು ತಳಿಗಳ ಬಗ್ಗೆ ತಿಳಿದಿರಬೇಕು. ಉತ್ತಮ ಒಂಟೆಯ ಲಕ್ಷಣಗಳು; ಸ್ವಭಾವ; ಸಹಜ ಗುಣಗಳು; ಆಹಾರು ಮತ್ತು ನೀರು; ನಡಿಗೆಯ ಭಂಗಿ ಮತ್ತು ವೇಗ; ಚಳಿಗಾಲದ ವಿಕಲತೆ ಮತ್ತು ಅದರಿಂದ ರಕ್ಷಣೆ; ಜೀನು (Saddle) ಚೌಕಟ್ಟು (Frame)ಮತ್ತು ಆಸನ(Dol)ಗಳಿಗಿರುವ ವ್ಯತ್ಯಾಸ ಹಾಗೂ ಒಂಟೆಗಳನ್ನು ಸಜ್ಜುಗೊಳಿಸುವುದು ತಿಳಿದಿರಬೇಕು. ಒಂಟೆಗಳಿಗೆ ತಗುಲುವ ಸಾಮ್ನಾನ್ಯ ರೋಗಗಳು ಮತ್ತು ಅವುಗಳಿಗೆ ಮಾಡಬಹುದಾದ ಪ್ರಥಮ ಚಿಕಿತ್ಸೆ ತಿಳಿದಿರಬೇಕು. ಒಂಟೆಗಳನ್ನು ಗೋರ್ ಬೌಂಡ್, ಝೂಲಾ ಇತ್ಯಾದಿಗಳಿಂದ ಅಲಂಕರಿಸಲು ತಿಳಿದಿರಬೇಕು.

3. **ಚಾರಣ :** ರಾತ್ರಿ ಅಥವಾ ಹಗಲು ವೇಳೆಗಳಲ್ಲಿ ಒಂಟೆಯ ಮೇಲೆ ಸವಾರಿ ಮಾಡುತ್ತಾ ಪ್ರಯಾಣ ಮಾಡುವ ಬಗ್ಗೆ ಇರುವ ಸಂಪ್ರದಾಯ ಗಳನ್ನು ತಿಳಿದಿರಬೇಕು.

   i) ನಕ್ಷತ್ರಗಳ ಸಹಾಯದಿಂದ ಸಮಯ ಮತ್ತು ದಿಕ್ಕುಗಳನ್ನು ತಿಳಿಸಲು ಬರಬೇಕು.

   ii) ಮರಳುಗಾಡಿನಲ್ಲಿ ಕಾಲುನಡಿಗೆಯಲ್ಲಿ ಪ್ರಯಾಣ ಮಾಡುವಾಗ ಅನುಸರಿಸಬೇಕಾದ ನಿಯಮಗಳ ಅರಿವಿರಬೇಕು. ಮತ್ತು ಸೂರ್ಯನ ಝಳಕ್ಕೆ ಜ್ಞಾನ ತಪ್ಪುವುದು (sun stroke) ಮತ್ತು ಬಾಯಾರಿಕೆ ಇವುಗಳಿಂದ ರಕ್ಷಿಸಿಕೊಳ್ಳುವ ಬಗ್ಗೆ ತಿಳಿದಿರಬೇಕು.

   iii) ಒಬ್ಬ ಗೆಳೆಯನೊಡನೆ ಒಟ್ಟಿನಲ್ಲಿ 48 ಕಿ.ಮೀ. (30 ಮೈಲಿ) ಒಂಟೆ ಸವಾರಿ ಪ್ರಯಾಣ ಮಾಡಬೇಕು. ಪ್ರತಿಪ್ರಯಾಣವೂ ಕನಿಷ್ಠ 16 ಕೀ.ಮೀ. (10 ಮೈಲಿ) ಇರಬೇಕು. ಈ ಪ್ರಯಾಣಗಳ ವೇಳೆ ಮರಳುಗಾಡು ಜನರ ಸಾಮನ್ಯ ಜೀವನ; ಒಂಟೆಗಳ ಸ್ವಭಾವಗಳ ಬಗ್ಗೆ ಅಧ್ಯಯನ ಮಾಡಿ ತನ್ನ ಗಮನಿಕೆಗಳ ಬಗ್ಗೆ ದಾಖಲೆ ಪುಸ್ತಕ ತಯಾರಿಸಬೇಕು. ಈ ಪ್ರಯಾಣಗಳ ಸಮಯದಲ್ಲಿ ಕನಿಷ್ಠ 2 ರಾತ್ರಿಗಳನ್ನು ಓಯಸಿಸ್ ಅಥವಾ ಗ್ರಾಮಗಳಲ್ಲಿ ಕಳೆದಿರಬೇಕು.

iv) **ಜನ ಜೀವನ :** ಪ್ರಚಲಿತವಿರುವ ಒಂಟೆ ಸವಾರನ ಜನಪದಗೀತೆಯನ್ನು ಹಾಡಬೇಕು. ಅಥವಾ ಆಲ್‌ಗೋಜೆ (Algoje) ಪಾತ್ರ ವಹಿಸಬೇಕು. ಅಥವಾ ಮರಳುಗಾಡು ಪ್ರದೇಶದ ಯಾವುದಾದರೊಂದು ಜನಪದ ನೃತ್ಯದಲ್ಲಿ ಭಾಗವಹಿಸಬೇಕು.

**7. ನಾಗರಿಕ**

1. ಮತದಾರನ ಕನಿಷ್ಠ ಅರ್ಹತೆ ತಿಳಿದಿರಬೇಕು ಹಾಗೂ ತನ್ನ ಕುಟುಂಬದಲ್ಲಿ ಮತ್ತು ನೆರೆಯವರಲ್ಲಿ ಇರುವ ಪ್ರತಿಯೊಬ್ಬ ಮತದಾರನೂ ಮತ ಚಲಾಯಿಸುವಂತೆ ಪ್ರೇರೇಪಿಸಬೇಕು.



2. ಈ ಕೆಳಕಂಡ ಅಂಶಗಳ ಬಗ್ಗೆ ತಿಳಿದಿರಬೇಕು.
   i) ಭಾರತ ಸರ್ಕಾರದ ರಾಷ್ಟ್ರಪತಿಗಳು ಮತ್ತು ಉಪರಾಷ್ಟ್ರಪತಿಗಳು ಹಾಗೂ ರಾಜ್ಯಗಳ ರಾಜ್ಯಪಾಲರುಗಳ ಅಧಿಕಾರ ಮತ್ತು ಕರ್ತವ್ಯಗಳು.
   ii) ಲೋಕಸಭೆ, ರಾಜ್ಯಸಭೆ, ವಿಧಾನಸಭೆ ಮತ್ತು ವಿಧಾನ ಪರಿಷತ್ತುಗಳ ಕಾರ್ಯವ್ಯಾಪ್ತಿ.
   iii) ತನ್ನ ಪ್ರದೇಶಕ್ಕೆ ಸಂಬಂಧಿಸಿದಂತೆ ಸ್ಥಳೀಯ ಸಂಸ್ಥೆಗಳಾದ (ಪುರ ಸಭೆ, ಜಿಲ್ಲಾ ಪಂಚಾಯತ್, ದಂಡು ಪ್ರದೇಶ ಪಂಚಾಯತ್) ಕಾರ್ಯ ನಿರ್ವಹಣೆ.
3. ರಾಜ್ಯ ಮತ್ತು ಸ್ಥಳೀಯ ಆಡಳಿತಾಂಗದ ಕಾರ್ಯ ನಿರ್ವಹಣೆಯ ಬಗ್ಗೆ ತಿಳಿದಿರಬೇಕು.
4. ದೇಶದ ನ್ಯಾಯಾಂಗ ವ್ಯವಸ್ಥೆಯ ಬಗ್ಗೆ ತಿಳಿದಿರಬೇಕು.
5. ಶಾಲೆಯ ದಳದ 'ಅಣಕು ಲೋಕಸಭೆ'ಯಲ್ಲಿ ಸಕ್ರಿಯವಾಗಿ ಭಾಗವಹಿಸಬೇಕು.

**8. ಆರೋಹಿ (Climber)**

1. 14 ವರ್ಷ ತುಂಬಿದವನಾಗಿರಬೇಕು.
2. ಕನಿಷ್ಠ 2 ಕಿ.ಮೀ. ಸುತ್ತಳತೆಯ ಪರ್ವತ ಪ್ರದೇಶದ ಬಗ್ಗೆ ತಿಳಿದಿರಬೇಕು. ತುರ್ತು ಸಂದರ್ಭದಲ್ಲಿ ಹತ್ತಿರದಲ್ಲಿ ಲಭ್ಯವಿರುವ ದೂರವಾಣಿ ಹಾಗೂ ಕರೆಯಬಹುದಾದ ವೈದ್ಯರನ್ನು ತಿಳಿದಿರಬೇಕು.



3. ದಿಕ್ಸೂಚಿ ಮತ್ತು ಭಾರತ ಭೂಮಾಪನದವರ ನಕಾಶೆ (ಅಥವಾ ಸ್ಥಳೀಯ ತತ್ಸಮಾನವಾದ ನಕ್ಷೆ) ಉಪಯೋಗಿಸಿಕೊಂಡು ಸೂಚಿತ ಸ್ಥಳಕ್ಕೆ (ಪರ್ವತ ಪ್ರದೇಶದಲ್ಲಿ) ದಾರಿಯನ್ನು ಕಂಡು ಹಿಡಿಯಬೇಕು ಮತ್ತು ಪರ್ವತಾರೋಹಣದ ಸಾಮರ್ಥ್ಯವನ್ನು ತೋರಿಸಬೇಕು.
4. ಮೂಳೆ ಮುರಿತ, ಕೀಲು ತಪ್ಪುವುದು, ಜಜ್ಜುಗಾಯ, ಮೆದುಳಿನ ಆಘಾತ, ಗಾಬರಿಗಳಿಗೆ ಪ್ರಥಮ ಚಿಕಿತ್ಸೆ ನೀಡುವುದನ್ನು ತಿಳಿದಿರಬೇಕು. ಹಾಗು ರೋಗಿಯನ್ನು ಸಾಗಿಸುವ ವಿಧಾನವನ್ನು ತಿಳಿದಿರಬೇಕು.
5. ಕನಿಷ್ಠ 1200 ಮೀ. ಎತ್ತರವಿರುವ ಪರ್ವತ ಪ್ರದೇಶದಲ್ಲಿ ಕನಿಷ್ಠ 3 ದಿನಗಳ ಚಾರಣವನ್ನು ಕೈಗೊಳ್ಳಬೇಕು. (ಅನುಕ್ರಮವಾಗಿರುವ ಅವಶ್ಯಕತೆಯಿಲ್ಲ).
6. ಅಧಿಕೃತ ಶಿಲಾರೋಹಣ ಶಿಬಿರದಲ್ಲಿ ಭಾಗವಹಿಸಿದ ಬಗ್ಗೆ ಪ್ರಮಾಣ ಪತ್ರವನ್ನು ಪಡೆದಿರಬೇಕು.

**9. ನಾಗರಿಕ ರಕ್ಷಣೆ**




1. ತನ್ನ ಮೊಹಲ್ಲಾದಲ್ಲಿ ಅಥವಾ ಸ್ಥಳದಲ್ಲಿ, ತನ್ನ ಮನೆಯಿಂದ, ಶಾಲೆಯಿಂದ, ಅಥವಾ ಕಾರ್ಯ ಸ್ಥಳದಿಂದ ಒಂದು ಕಿ.ಮೀ. ತ್ರಿಜ್ಯದ ಅಳತೆಯಲ್ಲಿರುವ ನಾಗರಿಕ ರಕ್ಷಣಾ ಸಂಸ್ಥೆಯು ನೀಡುವ ಸೇವೆಯ ವಿವರ ತಿಳಿದಿರಬೇಕು. ಪಾಲಕರ (ವಾರ್ಡನ್) ಹೆಸರು, ಪಾಲಕರ ಸ್ಥಳಗಳು, ಪ್ರಥಮ ಚಿಕಿತ್ಸಾ ಸ್ಥಳ, ಔಷಧಾಲಯಗಳು, ಆಸ್ಪತ್ರೆಗಳು, ಮತ್ತು ಲಭ್ಯವಿರುವ ವಾಯು ಧಾಳಿಯ ಎಚ್ಚರಿಕೆಯ, ಇತರೆ ಸೇವೆಗಳ ಬಗ್ಗೆ ವಿವರಗಳು ತಿಳಿದಿರಬೇಕು.
2. ತುರ್ತುಸ್ಥಿತಿಯಲ್ಲಿ ವರದಿಯ ಪತ್ರವನ್ನು ಸರಿಯಾಗಿ ತುಂಬುವುದು, ಮತ್ತು ಲಿಖಿತ ವರದಿಯನ್ನು ಪಾಲಕರಿಗೆ ಕಳುಹಿಸುವುದನ್ನು ತಿಳಿದಿರಬೇಕು.
3. ವಾಯುಧಾಳಿ ಈ ರೀತಿಯ ಇತರ ತುರ್ತು ಸಂದರ್ಭಗಳಲ್ಲಿ ಉಂಟಾಗುವ ಗಾಯಾಳುಗಳಿಗೆ ಪ್ರಥಮ ಚಿಕಿತ್ಸೆ ನೀಡುವ ಮತ್ತು ರಕ್ಷಿಸುವ ವಿಧಾನಗಳನ್ನು ತಿಳಿದಿರಬೇಕು.
4. ಅಗ್ನಿಶಮನ ಮಾಡುವ ಕನಿಷ್ಠ ಎರಡು ವಿಧಾನಗಳ ತಿಳುವಳಿಕೆ ಇರಬೇಕು.
5. ತನ್ನ ಸ್ಥಳದ ಅಥವ ಮೊಹಲ್ಲಾದ ನಾಗರಿಕ ರಕ್ಷಣೆ ಸಂಸ್ಥೆಯಲ್ಲಿ ನೋಂದಣಿ ಆಗಿರುವ ಬಗ್ಗೆ ಪ್ರಮಾಣ ಪತ್ರ ಪಡೆದಿರಬೇಕು. ಹಾಗೂ ಈ ಕೆಳಕಂಡ

ನಾಗರಿಕ ರಕ್ಷಣಾ ಸೇವೆಗಳಲ್ಲಿ ಒಂದರಲ್ಲಿ ತರಬೇತಿ ಪಡೆದಿರುವ ಬಗ್ಗೆ ಪ್ರಮಾಣ ಪತ್ರವನ್ನು ಪ್ರಸ್ತುತ ಪಡಿಸಬೇಕು.

ಅ) ಅಗ್ನಿಶಾಮಕ ದಳ ಆ) ಪ್ರಥಮಚಿಕಿತ್ಸೆ ತಂಡ

ಇ) ಸಂದೇಶ ವಾಹಕ ಸೇವೆ ಈ) ದೂರ ಸಂಪರ್ಕ

ಉ) ಕುಸಿದು ಬಿದ್ದ ಮನೆಗಳಿಂದ ವ್ಯಕ್ತಿಗಳನ್ನು ರಕ್ಷಿಸುವ ವಿಧಾನಗಳನ್ನು ತಿಳಿದಿರಬೇಕು.

**10. ಸಮುದಾಯ ಕಾರ್ಯಕರ್ತ**



1. ಸಮುದಾಯ ಅಭಿವೃದ್ಧಿ ಪ್ರಕ್ರಿಯೆ ತಿಳಿದಿರಬೇಕು.
2. ತನ್ನ ಸುತ್ತಲಿನ, ಕನಿಷ್ಠ 12 ಮಂದಿ ಕಿರಿಯ ಬಾಲಕರನ್ನು ಮನವೊಲಿಸಿ ಅವರು ಚಳವಳಿಗೆ ಸೇರುವಂತೆ ಹುರಿದುಂಬಿಸಬೇಕು.
3. ಸಮುದಾಯ ಹಾಗೂ ಸಮುದಾಯ ಸಂಪನ್ಮೂಲಗಳ (ಉದಾ: ಬ್ಯಾಂಕುಗಳು, ಆಸ್ಪತ್ರೆಗಳು, ತಜ್ಞರು ಇತ್ಯಾದಿ) ನಡುವೆ ಸಂಪರ್ಕ ವ್ಯಕ್ತಿಯಾಗಬೇಕು.
4. ಶುದ್ಧನೀರು, ಶಾಲಾಕಟ್ಟಡ, ತರಕಾರಿ ಮಾರಾಟ ಸ್ಥಳ ಮುಂತಾದ ಮೂಲಭೂತ ಅವಶ್ಯಕತೆಗಳ ಪೈಕಿ ಕನಿಷ್ಠ ಎರಡರ ಸುಧಾರಣೆಗೆ ಅಥವಾ ಪರಿಹಾರಕ್ಕೆ ಯೋಜನೆ ರೂಪಿಸಲು ಸ್ಥಳೀಯ ಜನರೊಡನೆ ಸಹಕರಿಸ ಬೇಕು.
5. ತನ್ನ ಗ್ರಾಮ / ಮೊಹಲ್ಲಾ / ಕೊಳಚೆ ಪ್ರದೇಶದಲ್ಲಿ ರೋಗ ನಿರೋಧಕ (immunisation) ಶಿಬಿರದಲ್ಲಿ ಸಹಕರಿಸಬೇಕು.

**11. ಗಣಕಯಂತ್ರ ಜಾಗೃತಿ (ಕಂಪ್ಯೂಟರ್) (Computer Awareness)**

1. ಕಂಪ್ಯೂಟರ್‌ನ ಸಂಕ್ಷಿಪ್ತ ಇತಿಹಾಸ ಹಾಗೂ ಇತ್ತೀಚೆಗಿನ ಬೆಳವಣಿಗೆಗಳ ಬಗ್ಗೆ ಅರಿವಿರಬೇಕು.
2. ಕಂಪ್ಯೂಟರ್ ಸಲಕರಣೆಗಳು ಹಾಗೂ ಅದರ ಭಾಗಗಳ ಉಪಯೋಗದ ಬಗ್ಗೆ ಪಳಗಿರಬೇಕು.
3. ಸ್ಕೌಟ್/ಗೈಡ್ ಚಟುವಟಿಕೆಗಳಲ್ಲಿ ಕಂಪ್ಯೂಟರ್‌ಗಳನ್ನು ಉತ್ತಮರೀತಿಯಲ್ಲಿ ಬಳಸುವ ಬಗ್ಗೆ ತಿಳಿದಿರಬೇಕು.



4. ಸಾಮಾನ್ಯವಾಗಿ ಬಳಸುವ ಪ್ಯಾಕೇಜ್‌ಗಳ ಬಗ್ಗೆ ಅರಿವಿರಬೇಕು.
5. ಈ ಕೆಳಗಿನವುಗಳನ್ನು ಮಾಡಬೇಕು.
   ಅ) ಫ್ಲಾಪಿ ಅಥವಾ ಹಾರ್ಡ್‌ಡಿಸ್ಕನ್ನು ಕಂಪ್ಯೂಟರ್‌ನಲ್ಲಿ ಬಳಸುವುದು.
   ಆ) ಕಂಪ್ಯೂಟರ್‌ನ ಬೂಟಿಂಗ್ ಮತ್ತು ಷಟ್‌ಡೌನ್ ಮಾಡುವುದು.

**12. ಬಾಣಸಿಗ (Cook)**



1. ಸಮತೋಲನ ಆಹಾರದ ಮಿಶ್ರಣ ಪದಾರ್ಥ-ಗಳನ್ನು ಅರಿತಿರಬೇಕು.
2. ದಿನಸಿ ಹಾಗೂ ತರಕಾರಿಗಳನ್ನು ಕೊಳ್ಳಲು ತಿಳಿದಿರಬೇಕು. ಕನಿಷ್ಠ ಆರು ಸ್ಕೌಟ್‌ಗಳ ಒಂದು ಪೆಟ್ರೋಲಿನ ಒಂದು ವಾರದ ಶಿಬಿರಕ್ಕೆ ಅವಶ್ಯಕವಿರುವ ದಿನಸಿ, ತರಕಾರಿ ಪಟ್ಟಿ (ಉತ್ತಮ ಪೋಷಕಾಂಶಗಳಿಂದ ಕೂಡಿದ, ಬೆಲೆಯ ಸಹಿತ) ತಯಾರಿಸಬೇಕು.
3. ಅಡಿಗೆ ಸ್ಥಳವನ್ನು ಸರಿಯಾಗಿ ಅಣಿಗೊಳಿಸಬೇಕು. ಮಗನ್ ಚೂಲಾ, ಹರಿಯೊಲೆ ಮುಂತಾದ ಒಲೆಗಳಲ್ಲಿ ಬೆಂಕಿಯನ್ನು ಹೊತ್ತಿಸಬೇಕು. ಪರೀಕ್ಷಕರು ಸೂಚಿಸಿದ ರೀತಿಯಲ್ಲಿ ಐದು ಸ್ಥಳೀಯ ತಿನಿಸುಗಳು ಮತ್ತು ಎರಡು ಪಾನೀಯಗಳನ್ನು ಆ ಒಲೆಗಳಲ್ಲಿ ತಯಾರಿಸಬೇಕು. ಪಟ್ಟಣ ಪ್ರದೇಶಗಳಲ್ಲಿ ಗ್ಯಾಸ್ ಒಲೆ ಅಥವಾ ಇತರೆ ಸ್ಟೌವ್ ಬಳಸಬಹುದು. ಐದು ತಿನಿಸುಗಳ ಪೈಕಿ ಎರಡನ್ನು ಪಾತ್ರೆಗಳಿಲ್ಲದೆ ಬೇಯಿಸಿ ತಯಾರಿಸಬೇಕು.
4. ಸೂಕ್ತ ರೀತಿಯಲ್ಲಿ ಆಹಾರವನ್ನು ವಿತರಿಸಬೇಕು.
5. ಆರೋಗ್ಯಕರ ರೀತಿಯಲ್ಲಿ ಆಹಾರ, ಸಾಮಗ್ರಿಗಳನ್ನು ಸಂಗ್ರಹಣೆ ಮಾಡುವ ವಿಧಾನವನ್ನು ತಿಳಿದಿರಬೇಕು.

**13. ಸೈಕಲ್ ತಜ್ಞ**

1. ದೀಪ, ಗಂಟೆ ಅಥವಾ ಹಾರ್ನ್, ಹಿಂಬದಿಯ ದೀಪ, ಮತ್ತು ಪಂಪ್ ಇವುಗಳನ್ನು ಒಳಗೊಂಡ, ಸುಸ್ಥಿತಿಯಲ್ಲಿರುವ, ಸೈಕಲ್ ಅಥವಾ ಮೋಟಾರ್ ಸೈಕಲ್ ಅನ್ನು ಕನಿಷ್ಠ ಆರು ತಿಂಗಳಕಾಲ ತಾನು ಹೊಂದಿರುವ ಬಗ್ಗೆ ಪ್ರಮಾಣ ಪತ್ರ ಸಲ್ಲಿಸಬೇಕು. ತುರ್ತುಸ್ಥಿತಿಯಲ್ಲಿ ಕರೆ ಬಂದ ಕೂಡಲೇ



ಅದನ್ನು "ದೇಶದ ಸೇವೆಗಾಗಿ ಬಳಸಲು ಒಪ್ಪಿರುತ್ತೇನೆ ಹಾಗೂ ಬಳಸುತ್ತೇನೆ" ಎಂದು ಪ್ರಮಾಣ ಪತ್ರ ಸಲ್ಲಿಸಬೇಕು.

2. ತನ್ನ ವಾಹನವನ್ನು ತೃಪ್ತಿಕರವಾಗಿ ಸವಾರಿ ಮಾಡಬೇಕು. ಅದನ್ನು ಓಡುವ ಸ್ಥಿತಿಯಲ್ಲಿಟ್ಟಿರಬೇಕು. ಸೈಕಲ್ ಆದರೆ, ಅದನ್ನು ಎರಡೂ ಬದಿಯಿಂದ ಏರಲು ಹಾಗೂ ಇಳಿಯಲು ಸಮರ್ಥನಿರಬೇಕು.

3. ಪರೀಕ್ಷಕರಿಗೆ ಒಪ್ಪಿಗೆಯಾಗುವ ರೀತಿಯಲ್ಲಿ, ಪಂಕ್ಚರ್ ಹಾಕಬೇಕು. ಬ್ರೇಕ್ ಮತ್ತು ಚಕ್ರವನ್ನು ತೆಗೆದು ಬದಲಿಸಬೇಕು ಮತ್ತು ತನ್ನ ವಾಹನದ ಯಾವುದೇ ಭಾಗವನ್ನು ಪರೀಕ್ಷಕರಿಗೆ ಒಪ್ಪಿಗೆ ಆಗುವ ರೀತಿಯಲ್ಲಿ ಸರಿಪಡಿಸಬೇಕು.

4. ಹೆದ್ದಾರಿಯ ನಿಯಮಗಳು, ಸಂಚಾರಿ ಸಂಕೇತಗಳು, ದೀಪ ಹಚ್ಚುವ ನಿಖರ ಸಮಯ (ಅಂದರೆ ಸೂರ್ಯಾಸ್ತವಾದ ಬಳಿಕ) ತಿಳಿದಿರಬೇಕು. ರಸ್ತೆಗಳಿಗೆ ಸಂಖ್ಯೆಗಳನ್ನು ನೀಡುವ ಕ್ರಮವನ್ನು ತಿಳಿದಿರಬೇಕು ಮತ್ತು ರಸ್ತೆ ನಕ್ಷೆಯನ್ನು ಓದಲು ಸಮರ್ಥನಿರಬೇಕು.

5. ಕನಿಷ್ಠ ಒಂದು ಗಂಟೆಯ ಸವಾರಿಯ ನಂತರ ಮೌಖಿಕ ಸಂದೇಶವನ್ನು ತಪ್ಪಿಲ್ಲದೆ ಪುನರುಚ್ಚರಿಸಬೇಕು.

6. ಹಿಂದಿನ 6 ತಿಂಗಳುಗಳಲ್ಲಿ ತನ್ನ ವಾಹನ ಬಳಸಿದ ವಿವರಗಳನ್ನು ಪರೀಕ್ಷಕರಿಗೆ ತಿಳಿಸಬೇಕು.

7. ಸುಧಾರಿತ ಸೈಕಲ್ ಆಂಬುಲೆನ್ಸ್‌ನಲ್ಲಿ ರೋಗಿಯನ್ನು ಒಯ್ಯಲು ಸಮರ್ಥನಿರಬೇಕು.

### 14. ಚರ್ಚಾಪಟು (Debator)

1. ಯುಕ್ತ ರೀತಿಯಲ್ಲಿ ನಿರ್ವಹಿಸಿದ ಚರ್ಚಾಸ್ಪರ್ಧೆಗಳಲ್ಲಿ ಕನಿಷ್ಠ ಎರಡು ವಿಷಯಗಳ ಪರವಾಗಿ ಹಾಗೂ ಕನಿಷ್ಠ ಎರಡು ವಿಷಯಗಳ ವಿರೋಧವಾಗಿ ಚರ್ಚಿಸಬೇಕು.

2. ಚರ್ಚಿತ ವಿಷಯದ ಬಗ್ಗೆ ಪೂರ್ಣ ತಯಾರಿ ನಡೆಸಿ ಪರೀಕ್ಷಕರ ಸಮ್ಮುಖದಲ್ಲಿ ಕನಿಷ್ಠ ಐದು ನಿಮಿಷಗಳ ಕಾಲ, ಚರ್ಚೆಯಲ್ಲಿ ಭಾಗವಹಿಸಬೇಕು ಮತ್ತು ತನ್ನ ಚರ್ಚೆಯ ಅಂಶಗಳನ್ನು ಸಕ್ರಮವಾಗಿ ಸಂಕ್ಷಿಪ್ತವಾಗಿ ಬರೆದು ಪರೀಕ್ಷಕರಿಗೆ ಒಪ್ಪಿಸಬೇಕು.



3. ಚರ್ಚಾಸ್ಪರ್ಧೆಯ ಸಾಮಾನ್ಯ ನಿಯಮಗಳನ್ನು ತಿಳಿದಿರಬೇಕು ಮತ್ತು ಅಧ್ಯಕ್ಷರ ಕರ್ತವ್ಯ ಹಾಗೂ ಅಧಿಕಾರಗಳ ಬಗ್ಗೆ ತಿಳಿದಿರಬೇಕು.
4. ಚರ್ಚಾಸ್ಪರ್ಧೆಯ ಅಧ್ಯಕ್ಷ ಸ್ಥಾನವನ್ನು ನಿರ್ವಹಿಸಲು ತಿಳಿದಿರಬೇಕು.
5. ಒಂದು ಗುಂಪಿನಲ್ಲಿ ಚರ್ಚೆಯುನ್ನು ಯುಶಸ್ವಿಯಾಗಿ ನಡೆಸಲು ಸಮರ್ಥನಿರಬೇಕು.

**15. ಮಾದಕ ವಸ್ತು ಜಾಗೃತಿ (Drug awareness)**



1. ದುರುಪಯೋಗಪಡಿಸಿಕೊಳ್ಳಬಹುದಾದ ವಿವಿಧ ಮಾದಕ ವಸ್ತುಗಳ [ಮಾಲಿಕತ್ವದ (Proprictary) ಅಥವಾ ರಹಸ್ಯವಾದ (Cladestine)] ಅರಿವಿರಬೇಕು.
2. ವ್ಯಸನ (Addiction) ಅವಲಂಬನೆ (Dependence), ಹಿಂತೆಗೆಯುವಿಕೆ (Withdrawal) ಮತ್ತು ಸಹನೆ (Tolerance) ಪದಗಳ ಅರ್ಥವನ್ನು ತಿಳಿದಿರಬೇಕು.
3. ಮಾದಕ ವಸ್ತುಗಳ ದುರುಪಯೋಗದಿಂದ ಆರೋಗ್ಯಕ್ಕುಂಟಾಗುವ ಅಪಾಯಗಳ ಅರಿವಿರಬೇಕು.
4. ಏಕೆ ಮತ್ತು ಹೇಗೆ ಜನರು ಮಾದಕವಸ್ತುಗಳಿಗೆ ವ್ಯಸನಿಗಳಾಗುತ್ತಾರೆ ಎಂಬುದನ್ನು ಅರ್ಥ ಮಾಡಿಕೊಳ್ಳಬೇಕು.
5. ಮಾದಕ ವಸ್ತು ಜಾಗೃತಿಯು ಬಗ್ಗೆ ಒಂದು ಕಾರ್ಯಕ್ರಮವನ್ನು ಯೋಜಿಸಬೇಕು.
6. ದ್ರವ್ಯ ವ್ಯಸನಿಗಳಿಗಾಗಿ ಇರುವ ವಿವಿಧ ಬಗೆಯ ಸಹಾಯಗಳ ಅರಿವಿರಬೇಕು.

**16. ಜೀವ ಪರಿಸರ ತಜ್ಞ**

1. ಪರಿಸರ ಸಮತೋಲನಕ್ಕಾಗಿ ಕೆಲಸ ಮಾಡುತ್ತಿರುವ ಇತರೆ ಪ್ರತಿನಿಧಿ ಸಂಸ್ಥೆಗಳ ಅರಿವಿರಬೇಕು.
2. ಚರ್ಚೆಗಳ ಮೂಲಕ, ಶ್ರವಣ ದೃಶ್ಯ ಮಾಧ್ಯಮಗಳ ಮೂಲಕ, ಈ ವಿಷಯದ ಬಗ್ಗೆ ಜನರಿಗೆ ಶಿಕ್ಷಣ ಕೊಡಲು, ಸಮೀಪದಲ್ಲಿರುವ ವಿಷಯ ತಜ್ಞರ ಸಹಕಾರ ಪಡೆಯಬೇಕು.



3. ಮರ ಕಡಿಯುವುದರ ವಿರುದ್ಧ ಪ್ರಚಾರ ಮಾಡಬೇಕು.
4. ಮಳೆಗಾಲದಲ್ಲಿ ವನಮಹೊತ್ಸವ ಏರ್ಪಡಿಸಬೇಕು.
5. ಪ್ರಾದೇಶಿಕವಾಗಿ ಪರಿಸರ ಮಾಲಿನ್ಯ ಸಮಸ್ಯೆಗಳ ಬಗ್ಗೆ ಜನರಿಗೆ ಶಿಕ್ಷಣ ನೀಡಬೇಕು.
6. ಈ ಕೆಳಗಿನವುಗಳಲ್ಲಿ ಯಾವುದಾದರೂ 3 ಸಮಸ್ಯೆಗಳನ್ನು ಪರಿಹರಿಸಲು ಕೆಲಸ ಮಾಡಬೇಕು.

   ಅ. ಭೂ ಸವೆತ
   ಆ. ಮರ ಕಡಿಯುವುದು
   ಇ. ಪ್ರಾಣಿವಧೆ
   ಈ. ನೀರುಪೋಲು ಮಾಡುವುದು ಅಥವಾ ಜಲಮಾಲಿನ್ಯ
   ಉ. ವಾಯುಮಾಲಿನ್ಯ
   ಊ. ಕಸ ಹಾಕುವುದು

**17. ಅಗ್ನಿಶಾಮಕ (Fireman)**



1. ಎಣ್ಣೆ ದೀಪ, ಸ್ಪಿರಿಟ್ ಒಲೆ, ಹತ್ತಿ ಬಟ್ಟೆ, ಹಬ್ಬದ ಅಲಂಕಾರಗಳು ಹತ್ತಿ, ಉಣ್ಣೆ, ಸೆಲ್ಯುಲಾಯ್ಡ್‌ಗಳಂತಹ ಹತ್ತಿ ಉರಿಯುವ ವಸ್ತುಗಳನ್ನು ಕೇಂದ್ರೀಕರಿಸುವ ಅಪಾಯಗಳು ಹಾಗೂ ಸೂರ್ಯಕಿರಣ ಬಗ್ಗೆ ತಿಳಿದಿರಬೇಕು.
2. ಗ್ಯಾಸ್ ಸೋರುವುದನ್ನು ಪತ್ತೆ ಹಚ್ಚುವುದು ಹೇಗೆ ಮತ್ತು ವಿದ್ಯುತ್ ಸೋರಿಕೆಯಲ್ಲಿರುವ ಉಪಕರಣಗಳಿಂದಾಗುವ ಅಪಾಯದ ಬಗ್ಗೆ ತಿಳಿದಿರಬೇಕು.
3. ಅಗ್ನಿ ದುರಂತವಾದೊಡನೆ ಮೊದಲು ಯಾವ ಕ್ರಮಕೈಗೊಳ್ಳಬೇಕು. ಅಗ್ನಿಶಾಮಕ ಮತ್ತು ಆಂಬುಲೆನ್ಸ್‌ನ್ನು ಕರೆಯುವ ವಿಧಾನ; ಮನೆ ಮತ್ತು ಕೇಂದ್ರಸ್ಥಾನದ ಹತ್ತಿರದ ಸಹಾಯಕ ಕರೆಗಂಟೆ ಪರಿಸ್ಥಿತಿಯ ಬಗ್ಗೆ ಅರಿವು; ಸಹಾಯ ಬರುವವರೆಗಿನ ಅವಧಿಯಲ್ಲಿ ಏನು ಮಾಡಬೇಕು ಎಂದು ಅರಿತಿರಬೇಕು.
4. ಎರಡು ವಿಧದ ಅಗ್ನಿ ನಂದಿಸುವ ಸಲಕರಣೆಗಳು. ಬಕೆಟ್ ಮತ್ತು ಬಕೆಟ್ ಚೈನ್‌ಗಳನ್ನು ಉಪಯೋಗಿಸುವುದನ್ನು ತಿಳಿದಿರಬೇಕು.

